# ಅಂತ್ಯರ ಗಂಗೆ

ಪ್ರಿಯದ ವಿಶ್ವಸಾಹಿತಿ " ಸ್ಟೀಫಾನ್ ಜ್ವಿಗ್ " ಅವರ

## ಅಪರಿಚಿತ ಪ್ರೇಯಸಿ

ಹಾಗು, ಇನ್ನಿತರ ಕತೆಗಳು

" ಬಸವರಾಜ "

ಭಾರತೀ ಪ್ರಕಾಶನ ಮಂದಿರ

**ಬೊಂಬಾಯಿ**

**ಬೆಲೆ ೧-೪-೦ ರೂ.**

ಮುದ್ರಕರು :
ಶ್ರೀ. ಶೇಷಗಿರಿರಾವ ಕುಲಕರ್ಣಿ
ಸಾಧನ ಮುದ್ರಣಾಲಯ, ಧಾರವಾಡ

ಪ್ರಕಾಶಕರು :
ಭಾರತೀ ಪ್ರಕಾಶನ ಮಂದಿರ
"ಭಾರತೀ" ಆಫೀಸ್ ಬೊಂಬಾಯಿ 25

# ಅರಿಕೆ

‘ಅಂತರ ಗಂಗೆ’ ಅಥವ ‘ಅಪರಿಚಿತ ಪ್ರೇಯಸಿ’ ನನ್ನ ಮೊದಲನೆಯ ಪುಸ್ತಕ ಜ್ವಿಗ್‌ರ ಆರು ಕತೆಗಳ ಒಂದು ಸಣ್ಣ ಸಂಕಲನ. ನಾನು ‘ಅಪರಿಚಿತ ಪ್ರೇಯಸಿ’ ಒಂದನ್ನೇ ಬರೆದು ‘ಕತೆಗಾರ’ದ ಸಂಪಾದಕರ ಕಡೆ ಕಳಿಸಿದಾಗ ಅವರು ಅದನ್ನು ಪುಸ್ತಕ ರೂಪದಲ್ಲಿ ಏಕೆ ಪ್ರಕಟಿಸ ಕೂಡದೆಂದು ಕೇಳಿದ್ದರು. ಅವರ ಆ ಕೇಳಿಕೆ ನನಗೆ ಪ್ರೇರಣೆಯಾಯಿತು. ಆದಾದ ಮೇಲೆ ಒಂದರನಂತರ ಮತ್ತೊಂದರಂತೆ ಸಂಗ್ರಹದಲ್ಲಿ ಕಾಣಬರುವ ಕತೆಗಳನು ಕನ್ನಡಕ್ಕೆ ತಂದೆ. ನನಗೆ ಗೊತ್ತಿದ್ದಂತೆ ಇದರಲ್ಲಿರುವ ‘ಅದೃಶ್ಯ ಸಂಗ್ರಹ’ ಎನ್ನುವ ಒಂದೇ ಒಂದು ಕತೆ ‘ಚಿತ್ರಕಾರನ ಅಂತರಂಗ’ವೆಂಬ ಹೆಸರಿನಿಂದ ಭಾರತಿಯ ಮೊತ್ತ ಮೊದಲನೆಯ ಸಂಚಿಕೆಯಲ್ಲಿ ಪ್ರಕಟವಾಗಿತ್ತು. ಆ ವೇಳೆ ಅವರ ಕತೆಗಳು ಕನ್ನಡದಲ್ಲಿ ಕಾಣಲಿಲ್ಲ. ಈ ಸಣ್ಣ ಸಂಕಲನ ಅವರ ಕಥಾ ಸಾಹಿತ್ಯದ ರೂಪರೇಷೆಯನ್ನೂ ಕತೆಯ ಮಹತಿಯನ್ನೂ ಕನ್ನಡಕ್ಕೆ ತೋರಿಸಬಹುದೆಂದು ನಂಬಿದ್ದೇನೆ.

ಈ ಪುಸ್ತಕ ಬೆಳಕಿಗೆ ಬಂದುದು ಗೆಳೆಯರ ವಿಶ್ವಾಸದ ಒತ್ತಾಯದಿಂದ, ಪರಿಶ್ರಮದಿಂದ. ಭಾರತಿಯವರು ಹೊತ್ತ ಭಾರದಿಂದ, ನೀಡಿದ ಸಹಕಾರದಿಂದ. ಪ್ರತ್ಯಕ್ಷವಾಗಿ, ಅಪ್ರತ್ಯಕ್ಷವಾಗಿ ಇದಕ್ಕೆ ಕಾರಣರಾದವರೆಲ್ಲರಿಗೂ ನನ್ನ ನೆರಕೆ ಸಲ್ಲಬೇಕು. ಕೈತುಂಬ ಕೆಲಸವಿದ್ದಾಗಲೂ ಜ್ವಿಗ್‌ರ ಜೀವನ-ಸಾಹಿತ್ಯದ ಬಗೆ ಒಂದು ವಿಮರ್ಶಾತ್ಮಕ ಪರಿಚಯವನ್ನು ಬರೆದುಕೊಟ್ಟ ಶ್ರೀ ಕೃಷ್ಣ ಕುಮಾರ ಕಲ್ಲೂರರವರಿಗೆ ನಾನು ತುಂಬಾ ಋಣಿ.

ಪುಣೆ ಬಸವರಾಜ

೩—೩—೧೯೫೩

## ವಿಜ್ಞಾಪನೆ

“ ಸ್ಟಿಫಾನ್ ಜ್ವಿಗ್ ” ನಂತಹ ವಿಶ್ವಸಾಹಿತಿಯ ಪ್ರಥಮ ಪರಿಚಯ ಕನ್ನಡಿಗರಿಗಾದುದು ‘ ಭಾರತಿ ’ ಯ ಪ್ರಥಮ ಸಂಚಿಕೆಯಿಂದಲೇ. ಇದೀಗ ‘ ಶ್ರೀ ಬಸವರಾಜ ’ ರು ಅವರ ಕೆಲವು ಕತೆಗಳನ್ನು ಪುಸ್ತಕ ರೂಪದಲ್ಲಿ ಕನ್ನಡಿಗರಿಗೆ ಭಾರತೀ ಪ್ರಕಾಶನ ಮಂದಿರದ ಮುಖಾಂತರವಾಗಿ ನೀಡುತ್ತಿರುವುದು ನಮ್ಮ ಹೆಚ್ಚಿನ ಹೆಮ್ಮೆ. ಅದಕ್ಕಾಗಿ ನಾವು ‘ ಬಸವರಾಜ ’ ರಿಗೆ ತುಂಬಾ ಆಭಾರಿಗಳಾಗಿದ್ದೇವೆ.

ಸ್ಟೀಫಾನ್ ಜ್ವಿಗ್ಗರು ಬರೆದುದು ಒಟ್ಟಾರೆ 30ಕ್ಕೆ ಮಿಕ್ಕಿದ ಗ್ರಂಥಗಳು. ಅವುಗಳಲ್ಲಿ ಕತೆಗಳೂ ಮಹಾವ್ಯಕ್ತಿಗಳ ಜೀವನ ಚರಿತ್ರೆಗಳೂ ಮುಖ್ಯ. ಇಂಗ್ಲೀಷನಲ್ಲಿ 20ಕ್ಕೆ ಮಿಕ್ಕಿ ಅವರ ಗ್ರಂಥಗಳು ಅನುವಾದಿತವಾಗಿವೆ. ಇಲ್ಲಿ ಕೊಟ್ಟ ಕತೆಗಳು ಅವರ ಕಥನ ಕಲೆಯ ಮಾದರಿಗಳೆನ್ನಬಹುದು. ಇವುಗಳಲ್ಲಿ 5ನೆಯದು ಕತೆಗಾರದಲ್ಲೂ 3ನೆಯದು ಭಾರತಿಯಲ್ಲೂ ಒಮ್ಮೊಮ್ಮೆ ಬೆಳಕು ಕಂಡಿವೆ. ಮಿಕ್ಕವೆಲ್ಲಾ ಕನ್ನಡಿಗರಿಗೆ ಹೊಚ್ಚಹೊಸವು.

ಈ ಪುಸ್ತಕ ಪ್ರಕಟನೆ ತುಂಬ ತಡವಾಗಿದೆಯೆಂದು ವಿಷಾದದಿಂದ ಒಪ್ಪಬೇಕಾಗಿದೆ. ಹಸ್ತ ಪ್ರತಿಯು ತಯಾರಿಕೆಯಾಗಿ ಅಚ್ಚಿಗೆ ಅಣಿಯಾಗುವುದರಲ್ಲೂ, ಆ ಮೇಲೆ ಅಚ್ಚು ಕೂಟದ ಅಪರೀಕ್ಷಿತ ತೊಂದರೆಗಳಿಂದಲೂ, ನಮ್ಮ ಕೈಸೆರವು ಸಾಲದುದರಿಂದಲೂ ಹೀಗಾಗಿದೆ. ಅದಕ್ಕಾಗಿ ಓದುಗರಲ್ಲಿ ಕ್ಷಮೆ ಬೇಡದಿರಲಾರೆವು

ಈ ಪ್ರಕಟನೆಗೆ ಕಾರಣರಾದ ಹಾಗು ನೆರವಾದ ಶ್ರೀ ಬಸವರಾಜರಿಗೂ ಪ್ರಕಟನೆಗೆ ಸಾಕ್ಷಾತ್ತಾಗಿ ಪ್ರೋತ್ಸಾಹವನ್ನಿತ್ತ ಬೊಂಬಾಯಿ ಕೋ ಆಪರೇಟಿವ್ಹ ಇನ್ಸುರನ್ಸ್ ಕಂಪೆನಿಯ ಶ್ರೀ. ಎ. ಎಚ್. ಕುಲಕರ್ಣಿಯವರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಭಾರತ ಯೋಜನಾ ಬದ್ಧ ಪ್ರಕಟನೆಗಳನ್ನು ಕನ್ನಡಿಗರಿಗೀಯುವ ಸಂಕಲ್ಪ ಮಾಡಿದೆ. ಆ ಮೇರೆಗೆ ಇದೀಗ ಈ ಗ್ರಂಥ ‘ ಭಾರತಿ ’ ಯ 1952ರ ಕಾಣಿಕೆಯಾಗಿ ಪ್ರಕಟವಾಗಿದೆ. ಮುಂದಿನವೂ ಬರಲಿವೆ.

ಬೊಂಬಾಯಿ 25
ಮಾರ್ಚ 1953

—ಪ್ರಕಾಶಕರು
ಭಾ. ಪ್ರ. ಮಂದಿರ

---

## ಪರಿವಿಡಿ

# ಪರಿತ್ರಾಣ



" ಮೆಡಮ್, ಈ ಪತ್ರ ನಿಮ್ಮದು; ಇದರ ಉತ್ತರಕ್ಕಾಗಿ ಹೊರಗೆ ಒಬ್ಬ ಮನುಷ್ಯ ಕಾಯುತ್ತಿದ್ದಾನೆ."

ಇರೆನ್ ದಾಸಿಯ ಕೈಯಿಂದ ಪಾಕೀಟು ತೆಗೆದುಕೊಂಡಳು. ಕಾಗದದ ಒಂದು ಸಣ್ಣ ತುಣುಕಿನ ಮೇಲೆ 'ಪತ್ರ ತಂದವನಿಗೆ ನೂರು ಕ್ರೌನು ಕೊಡುವ ಕೃಪೆ ಮಾಡುವಿರಾ?' ಎಂದು ಬರೆಯಲಾಗಿತ್ತು. ಪತ್ರಕ್ಕೆ ದಿನಾಂಕವಿಲ್ಲ; ಹಸ್ತಾಕ್ಷರವಿಲ್ಲ. ಇಷ್ಟೇ ಅಲ್ಲ. ಬರವಣಿಗೆ ಕೂಡ ಉದ್ದೇಶಪೂರ್ವಕವಾಗಿ ಕೆಡಿಸಲಾಗಿತ್ತು. ಆದರೆ ಇರೆನಳಿಗೆ ಪತ್ರ ಯಾರದೆಂದು ತಿಳಿಯಲು ಹೊತ್ತು ಹಿಡಿಯಲಿಲ್ಲ. ಅವಳು ಅವಸರದಿಂದ ಮಹಡಿ ಮೇಲಿನ ಕೋಣೆಯ ಕಡೆ ಹೊರಟಳು. ಊಟಕ್ಕೆ ಕುಳಿತ ಗಂಡನ ಕಡೆಯಾಗಲಿ, ಮಕ್ಕಳ ಕಡೆಯಾಗಲಿ ಕಣ್ಣೆತ್ತಿ ನೋಡಲಿಲ್ಲ. ಕಪ್ಪಿನಲ್ಲಿ ಸುರುವಿದ ಚಹ ಕೂಡ ತಣ್ಣಗಾಗುತ್ತಿತ್ತು. ಇರೆನ್ ಇವಾವುದನ್ನೂ ಲಕ್ಷಿಸದೆ ಒಮ್ಮೆಲೆ ಹೊರಟುಬಿಟ್ಟಳು.

ಇರೆನ್ ಪೆಟ್ಟಿಗೆಯಿಂದ ನೂರು ನೋಟು ತೆಗೆದು ಒಂದು ಪಾಕೀಟನಲ್ಲಿಟ್ಟಳು. ಹೊರಗೆ ಪತ್ರ ತಂದ ಮನುಷ್ಯ ಕಾಯುತ್ತ ನಿಂತಿದ್ದ. ತಾನೇ ಸ್ವತಃ ಹೊರಗೆ ಹೋಗಿ ಅದನ್ನು ಅವನ ಕೈಲಿಟ್ಟು ಕಳಿಸಿಕೊಟ್ಟಳು.

ಮರಳಿದಾಗ ಅವಳ ಪತಿ ಚಹ ಕುಡಿಯುತ್ತಿದ್ದರು. ಅವರೇನೂ ಅನ್ನಲಿಲ್ಲ. ಒಮ್ಮೆ ಕಣ್ಣೆತ್ತಿ [illegible] ಇಂಗಿತಾರ್ಥದಿಂದ ನೋಡಿ ಮತ್ತೆ ಚಹ ಕುಡಿಯತೊಡಗಿದರು. ಇರೆನ್‌ಳು ದೇಹಾದ್ಯಂತ ನಡುಗುತ್ತಿದ್ದಳು. ಇದುವರೆಗೆ ಅವರು ಅವಳನ್ನು ಆ ರೀತಿಯಾಗಿ ನೋಡಿರಲಿಲ್ಲ. ಆ ನೋಟದ ಆಳ! ಆ ತೀಕ್ಷ್ಣತೆ! ಅಬ್ಬಾ!! .......ಇರೆನಳು ನಕ್ಕು, ಕೆಲದು, ಒಂದೆರಡು ಮುಸಿಹಾಸ್ಯದ ಮಾತಾಡಿ ವಾತಾವರಣದಲ್ಲಿ ಒಮ್ಮೆಲೆ ಹೊಕ್ಕು ಹರಡಿದ ಗಭೀರತೆಯನ್ನು ಕಳೆಯಲು ಬಯಸಿದಳು; ಆದರೆ ಸಾಧಿಸಲಿಲ್ಲ.

ಎಷ್ಟೊಂದು ಪ್ರಯತ್ನಿಸಿದರೂ ಅವಳಿಗೆ ಸರಿಯಾದ ಶಬ್ದಗಳೇ ಸಿಕ್ಕಲಿಲ್ಲ. ಹುಡುಗರು ಕೂಡ ಮೂಕರಾಗಿ ಚಹ ಕುಡಿದರು. ತಮ್ಮ 'ಮಮ್ಮಿ' (Mummy) ಯ ಜೊತೆ ಅನಂತರ ಅವರೂ ಮಾತನಾಡಲಿಲ್ಲ.



ಇರೆನ್ ತನ್ನ ಕೋಣೆಯಲ್ಲಿ ಹೋಗಿ ಒಬ್ಬಳೇ ಕುಳಿತಳು. ಒಂದು ದೀರ್ಘ ನಿಟ್ಟುಸಿರು ಹೊಮ್ಮಿಬಂತು. ಆ ಹಿಂದಿನ ದಿನ ನೆನಪಾಯಿತು ಆ ದಿನ ಅವಳು ತನ್ನ ಪ್ರೇಮಿಯ ಕೋಣೆಯಿಂದ ಮನೆಗೆ ಮರಳಲು ಕಳ್ಳಹೆಜ್ಜೆಯಲ್ಲಿ ಮೆಟ್ಟಲಿಳಿಯುತ್ತಿದ್ದಳು. ಎಂದಿನಂತೆ ಅಂದೂ ಕೂಡ ಅವಳ ಎದೆಯಲ್ಲಿ ಅಜ್ಞಾತಭೀತಿ ನೆಲೆಸಿತ್ತು. ಬಾಗಿಲಿಂದ ಹೊರಗೆ ಬೀಳುವಾಗ ಬೇರೊಬ್ಬ ಹೆಂಗಸಿನ ಕೈ ತಗುಲಿತ್ತು ಆಗಂತೂ ಅವಳ ಮೈಯಂತ ಮೈಯಲ್ಲಾ ಬೆವೆತು ತಣ್ಣಗಾಗಿತ್ತು. ಹೆಂಗಸಿನೊಡನೆ ತೊದಲುತ್ತ ಒಂದೆರಡು ಹಾರಿಕೆಯ ಮಾತು ಮಾತಾಡಿ ಹೊರಗೆ ಹೋಗಲು ಯತ್ನಿಸಿದಳು. ಆದರೆ ಆ ಹೆಂಗಸು ತನ್ನೆರಡೂ ಕೈಯಿಂದ ಬಾಗಿಲು ಹಿಡಿದು, ಅವಳನ್ನು ಹೋಗಗೊಡದೆ ಅವಳ ಆಶ್ಚರ್ಯಚಕಿತ ಮುಖದ ಕಡೆಗೇ ನೋಡುತ್ತ ನುಡಿದಿದ್ದಳು: "ಕೊನೆಗಾದರೂ ನೀನು ನನ್ನ ಕೈಯಲ್ಲಿ ಸಿಕ್ಕಿಯಲ್ಲ.... ! ನನ್ನ ಕಲ್ಪನೆ ಸುಳ್ಳಾಗಲಿಲ್ಲ; ನಾನು ನೆನೆಸಿದಂತೆಯೇ ನಡೆದಿದೆ. ಎಡ್ವರ್ಡ್ ದಿನಾಲು ತಡಮಾಡಿ ಏಕೆ ಮನೆಗೆ ಬರುತ್ತಾನೆಂದು ಇಗ ನನಗೆ ಹೊಳೆಯಿತು. ಆದರೆ ನೀನು........ ಅಂತಹ ಸುಂದರ, ಸಧೃಢ, ಧನಿಕ ಪತಿಯನ್ನು ಪಡೆದೂ ಕೂಡ ನನ್ನಂತಹ ಬಡಹುಡಿಗಿಯ ಆಸ್ತಿಯನ್ನೇಕೆ ಕಸಿದುಕೊಳ್ಳಲು ಹೊರಟಿರುವೆ ? ನನ್ನ ಪ್ರೇಮಿಯನ್ನೇಕೆ ನನ್ನಿಂದ ದೂರ ಸೆಳೆಯುತ್ತಿರುವೆ ?''

ಇರೆನ್ ಮುಂಕಾಗಿ ನಿಂತಿದ್ದಳು. ಆ ಘಟನೆ ಅಷ್ಟು ಅಕಸ್ಮಿಕವಾಗಿ ನಡೆದೀತೆಂಬ ಕಲ್ಪನೆ ಕೂಡ ಇರಲಿಲ್ಲ ಅವಳಿಗೆ ಹೇಗಾದರೂ ಮಾಡಿ, ನೂರೆಂಟು ಸುಳ್ಳು ಹೇಳಿ, ತಪ್ಪುತಿಳುವಳಿಕೆಯಾಗಿದೆಯೆಂದು ತಿಳಿಸಿಕೊಟ್ಟು ಹೊರಗೆ ಹೋಗಲು ಯತ್ನಿಸಿದ್ದಳು. ಆದರೆ ಆ ಹೆಂಗಸು ಇವಳ ಇಚ್ಛೆಯನ್ನು ಈಡೇರಗೊಟ್ಟಿರಲಿಲ್ಲ. ಆಗ........ಆಗ ಇರೆನ್ ಯಾವುದೊ ಅರಿಯದ ಭಾವನಾವೇಶದಲ್ಲಿ ಮತ್ತೆಂತು ಪಾರಾಗುವುದೆಂದರಿಯದೆ ಕೈಚೀಲ ತೆರೆದು

ಒಳಗಿದ್ದ ಹಣ ಸುರುವುತ್ತ ಅವಳಿಗೆ ಹೇಳಿದಳು— "ನೋಡು, ........ಇಲ್ಲಿ ........ಇಲ್ಲಿ ಇವೆಲ್ಲ ಬಿದ್ದಿವೆ; ಇವೆಲ್ಲವನ್ನು ತೆಗೆದುಕೋ........ ನನ್ನನ್ನು ಹೋಗಗೊಡು. ಮುಂದೆ ನಾನಿಲ್ಲಿಗೆ ಬರುವುದಿಲ್ಲ ........ ಎಂದಿಗೂ ಬರುವುದಿಲ್ಲ........ ಮಾತು ಕೊಡುತ್ತೇನೆ........ ಆಣೆಮಾಡಿ ಹೇಳುತ್ತೇನೆ." ಅಂತೂ ಹಣ ಅವಳನ್ನು ಅಂದು ಪಾರುಮಾಡಿತ್ತು.

ಮನೆಗೆ ಮರಳಿ, ಭಯದ ಅಂಶ ಕಡಿಮೆಯಾದನಂತರ ಆಕಸ್ಮಿಕ ಘಟನೆಯನ್ನು ಕುರಿತು ಸಾವಧಾನವಾಗಿ ಆಲೋಚಿಸಿದ್ದಳು. ಅವಳ ಪತಿ ಒಬ್ಬ ನಾಮಾಂಕಿತ ಬ್ಯಾರಿಸ್ಟರ್; ಸಭ್ಯ ಹಾಗು ಸುಶಿಕ್ಷಿತ. ಸಮಾಜದಲ್ಲಿ ಆತನ ಮನೆತನಕ್ಕೆ ವಿಶೇಷ ಗೌರವ. ಅಂಥವನ ಹೆಂಡಿತಿಯಷ್ಟೇ ಅಲ್ಲ; ಜೊತೆಗೆ ಮುತ್ತಿನಂತಹ ಎರಡು ಮಕ್ಕಳ ತಾಯಿಕೂಡ. ಇಂಥ ಸ್ಥಿತಿಯಲ್ಲಿ.... ... ಎಲ್ಲಿಯಾದರೂ ತನ್ನ ಗುಪ್ತಪ್ರೇಮದ ಮುಸುಕು ಕಳಚಿಬಿದ್ದರೆ?........... ಎಂಬುದೇ ಇರೆನ್‌ಳ ಎದೆಗುದಿ.

ಇರೆನ್‌ಳಿಗೆ ಕಾರ್ಲ್‌ ಎಡ್ವರ್ಡ್‌ನ ಪ್ರಥಮ ಪರಿಚಯವಾದದ್ದು ಒಂದು "ಪಾರ್ಟಿ"ಯಲ್ಲಿ. ಇರೆನ್‌ಳಂಥ ಸುಂದರ, ಪ್ರತಿಷ್ಠಿತ ಯುವತಿ ಅವನಲ್ಲಿ ಅನುರಕ್ತಳಾಗುವಂಥ ವಿಶೇಷವೇನೂ ಅವನಲ್ಲಿರಲಿಲ್ಲ. ಆದರೆ ಅವನ 'ಪಿಯಾನೋ' ಕೌಶಲ್ಯ ಮಾತ್ರ ವಿಚಿತ್ರವಾಗಿತ್ತು. ಆ 'ಪಿಯಾನೋದ' ನಾದದೊಡನೆ ಅವಳು ಅರಿವಿಲ್ಲದೆಯೇ ಅವನ ಕಡೆ ಸರಿದಿದ್ದಳು........ 'ಆ ಹೆಂಗಸೊಬ್ಬಳು ಅವರಿಬ್ಬರ ನಡುವೆ ಇಲ್ಲದಿರುತ್ತಿದ್ದರೆ –!'

ಇರೆನ್ ಅಂದು ಆ ಹೆಂಗಸಿಗೆ ಮಾತು ಕೊಟ್ಟಂತೆ ಇನ್ನು ಮುಂದೆ ಭೆಟ್ಟಿಯಾಗುವದಿಲ್ಲವೆಂದು ಕಾರ್ಲ್‌ನಿಗೆ ಒಂದು ಕಾಗದ ಬರೆದಳು. ಆದರೆ ಕಾರ್ಲ್‌ನಂತೂ ಮರುದಿನ ಸಂಜೆಗೇ ಅವಳನ್ನು ಕಾಣುವ ಆಶೆಯನ್ನು ವ್ಯಕ್ತಪಡಿಸಿದ್ದ. ಅವಳಲ್ಲಿ ಆದ ಆಕಸ್ಮಿಕ ಬದಲಾವಣೆಯ ಕಾರಣವನ್ನು ತಿಳಿಯುವ ಕುತೂಹಲ ತೋರಿಸಿದ್ದ.... ... ಇರಿನ್ ತನ್ನ ಸಂಕಲ್ಪದ ಅತಿರಿಕ್ತವಾಗಿಯೂ ಯಾರೂ ತನ್ನನ್ನು ಗುರುತಿಸಕೂಡದೆಂಬ ಆಶೆಯಿಂದ ಕರಿಯ 'ಗೌನಿ'ನಲ್ಲಿ ಮೈಯೆಲ್ಲ ಮುಚ್ಚಿಕೊಂಡು ಮತ್ತೆ ಆ ಹೊಟೆಲ್‌ದ ಕೊನೆ ವರೆಗೆ ಹೋಗಿದ್ದಳು.

ಆದರೆ ಆ ಸಲ ಮನೆಗೆ ಮರಳಿದಾಗ ಆ ಹೆಂಗಸು ತನ್ನ ಕೋಣೆಯಲ್ಲೇ ಕುಳಿತಿದ್ದಾಳೆ! ಇರೆನ್‌ಳ ಮುಖ ಭೀತಿಯಿಂದ ಬಿಳುಪೇರಿತು. ಆ ಹೆಂಗಸು ಇದಾವುದರ ಕಡೆಗೂ ಲಕ್ಷ್ಯಕೊಡಲಿಲ್ಲವೆಂಬಂತೆ— "ಶ್ರೀಮತಿ ಇರೆನ್ ಬನ್ನಿ ಒಂದು ಗಂಟೆಯಿಂದ ನಿಮ್ಮ ದಾರಿಕಾಯುತ್ತಿದ್ದೇನೆ" ಎಂದಳು. ಅವಳ ತುಟಿಯಮೇಲೆ ಇವಳನ್ನು ಹೀಯಾಳಿಸುವಂತಹ ನಗು ಒಂದು ಸುಳಿದು ಮಾಯವಾಯಿತು.

'ಓ!' ಇರೆನ್ ಉಸ್ಸೆಂದು ಕುಸಿದೇ ಬಿದ್ದಳು. ಆ ಹೆಂಗಸು ತನ್ನ ಹೆಸರು, ದೆಸೆ ಎಲ್ಲಾ ಕಂಡುಹಿಡಿದಿದ್ದಾಳೆ! ಇನ್ನೇನು? ........ಅತ್ಯಂತ ಕಷ್ಟದಿಂದ ಅವಳನ್ನು ನೋಡುತ್ತ ಇರೆನ್ ಕೇಳಿದಳು: ........"....ಕೊನೆಗೆ ........ನೀನು ಬಯಸುವುದಾದರೂ ಏನು?"

ನಿಮಗೇ ಚೆನ್ನಾಗಿ ತಿಳಿದಿರುವಾಗ ನಾನೇಕೆ ಹೇಳಲಿ ಶ್ರೀಮತಿಯವರೆ! ನಾನು ಇಲ್ಲಿಗೆ ಬಂದುದರ ಉದ್ದೇಶ ನಿಮಗೆ ಹೊಳೆಯದೆ ಇಲ್ಲ."

"ಆದರೆ... ...ಆದರೆ, ನಾನು ಅಂದಿನಿಂದ ಅವನನ್ನು ಕಂಡಿಲ್ಲಕೂಡ ........ನಿನಗೆ ವಚನಕೊಟ್ಟಿದ್ದೇನಲ್ಲ"

"ಸುಳ್ಳಾಡಬೇಡ; ಅದರಿಂದ ಏನೂ ಉಪಯೋಗವಿಲ್ಲ. ನಾನೇ ಹೋಟೆಲದ ವರೆಗೆ ಹಿಂಬಾಲಿಸಿದ್ದೆ... ..."

ಅಂದಿನ ಅವಳ ಬಾಯಿ ಮುಚ್ಚಲು ತನ್ನ "ಪರ್ಸು" ಪೂರ್ತಿ ಅವಳ ಕೈಯಲ್ಲಿಡಬೇಕಾಯಿತು ಮರ್ಯಾದೆಯುಳಿಯುವಂತೆ ಅವಳನ್ನು ಹೊರ ಹಾಕದೆ ಗತ್ಯಂತರವಿರಲಿಲ್ಲ. ಇರೆನ್ ಆ ದಿನದಿಂದ ಮೂರು ದಿನಗಳವರೆಗೆ ತನ್ನ ಕೋಣೆಯಲ್ಲಿಯೇ ಬಿದ್ದಿದ್ದಳು. ವಿಚಿತ್ರ ವಿಚಾರಗಳು ತಲೆಯಲ್ಲಿ ಸುಳಿಯುತ್ತಿದ್ದುವು. ಅವಳ ಆಕಸ್ಮಿಕ ಪರಿವರ್ತಿತ ವರ್ತನೆಯನ್ನು ಎಲ್ಲರೂ ಕುತೂಹಲದಿಂದ ನೋಡುತ್ತಿದ್ದರು ಮನೆಯ ಆಳುಗಳಲ್ಲಿಯೂ ಗುಸುಗುಸು ಮಾತಾಗುತ್ತಿದ್ದುವು. ಹುಡುಗರು ಏನೂ ತಿಳಿಯದೆ ಆಶ್ಚರ್ಯದಿಂದ 'ಮಮ್ಮಿ'ಯ ಕಡೆಗೆ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡುತ್ತಿದ್ದರು. ಒಂದೆರಡು ಸಲ ಅವಳು ಏನನ್ನೊ ಮರೆಮಾಚುತ್ತಿರುವದಾಗಿಯೂ ಭಾವಿಸಿಕೊಂಡರು. ಆದರೆ ಇರೆನ್ ಹುಸಿನಗೆಯಿಂದ ಮಾತು ಹಾರಿಸುತ್ತಿದ್ದಳು.

ತನ್ನ ಗಂಡನಾದವನಿಗೆ ಅದೆಲ್ಲ ಹೇಳುವದಾದರೂ ಹೇಗೆ! ಆದರೂ ಅವಳ ಜೀವನ ಕಲ್ಲುಕಟ್ಟಿಕೊಂಡು ನೀರಿಗೆ ಬಿದ್ದಂತಾಗಿತ್ತು.

ದಿನ ಬೆಳಗಾದರೆ ಅವಳಿಗೆ ಆ ಹೆಂಗಸಿನ ವಿಚಾರವೇ. 'ಅವಳ ಬಾಯಿ ಮುಚ್ಚಲು ಎಲ್ಲಿಯವರೆಗೆ ಹಣ ಕೊಡುತ್ತಿರುವುದು? ದಿನ ಕಳೆದಂತೆ ಆ ಹೆಂಗಸಿನ ಬೇಡಿಕೆಯೂ ಬೆಳೆಯಬಹುದು. ಕೊನೆಗೆ ಒಂದು ದಿನ ಅವಳ ಬಾಯಿ ತುಂಬಲು ಒಂದು ಕಾಸು ಕೂಡ ತನ್ನಲ್ಲಿ ಉಳಿಯಲಿಕ್ಕಿಲ್ಲ........... ಆಗ! ಓ!, ಇರೆನ್‌ಳ ತಾಳ್ಮೆ ತಡೆಯದಾಗಲು, ಎರಡೂ ಕೈಗಳಿಂದ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಮುಂಕಾಗಿ ಕುಳಿತು ಬಿಟ್ಟಳು.

   

ಆ ಎಲ್ಲಾ ಪರಿಸ್ಥಿತಿ ಇಂದು ಮತ್ತೆ ಮರುಕೊಳಿಸಿತು. ಗಂಡನೂ ಹುಡುಗರೂ ಚಹ ಕುಡಿದು ಯಾವಾಗಲೋ ಹೊರಟು ಹೋಗಿದ್ದರು. ಅವಳು ಆ ಮನುಷ್ಯ ತಂದುಕೊಟ್ಟ ಆ ಕಾಗದನನ್ನು ತೆಗೆದು ಮತ್ತೊಮ್ಮೆ ಓದಿದಳು. ಒಂದು ತರದ ವಿಚಿತ್ರ ತಿರಸ್ಕಾರ, ಕೋಪ ಅವಳ ಮುಖದ ಮೇಲೆ ಸುಳಿಯಿತು. ಕೈಲಿದ್ದ ಪತ್ರವನ್ನು ಚೂರುಚೂರಾಗಿ ಹರಿದು ಬಳಿಯಲ್ಲಿದ್ದ ಬೆಂಕಿಯಲ್ಲಿ ಒಗೆದುಬಿಟ್ಟಳು. ಕಾಗದದ ಸಣ್ಣ ಸಣ್ಣ ತುಣುಕುಗಳು ನೋಡುತ್ತಿದ್ದಂತೆಯೇ ಕರಕಾದುವು. ಸಮಾಧಾನದ ಉಸಿರೆಳೆದು ಕೋಣೆಯಿಂದ ಹೊರಗೆ ಹೋಗಲು ತಿರುಗಿದಳು. ಆದರೆ—

ಬಾಗಿಲಲ್ಲಿ ಅವಳ ಪತಿ ನಿಂತು ನೋಡುತ್ತಿದ್ದರು! ಕಣ್ಣು ಕತ್ತಲು ಗುಡಿಸಿದಂತಾಯಿತು! ಎಲ್ಲಿ ಬೀಳುವೆನೋ ಎನ್ನಿಸಿತು ಅವಳಿಗೆ. ಸಮೀಪದಲ್ಲಿದ್ದ ಕುರ್ಚಿಯ ಆಸರೆ ಪಡೆದು ಹೇಗೋ ತಡೆದು ನಿಂತಳು ಅವಳ ಪತಿ ಅವಳ ಕಡೆಗೊಮ್ಮೆ ನೋಡಿ ಶಾಂತ ಸ್ವರದಲ್ಲಿ ಹೇಳಿದರು! "ಇರೆನ್ ನಿನ್ನ ವೈಯಕ್ತಿಕ ಪತ್ರಗಳ ಬಗ್ಗೆ ನನಗೇನೂ ತಿಳಿಸಬೇಕಾಗಿಲ್ಲ. ನಿನ್ನ ಗುಟ್ಟನ್ನು ನನ್ನಿಂದ ಮುಚ್ಚಿಡಲು ನೀನು ಸಂಪೂರ್ಣ ಬಾಧ್ಯಳಿರುವೆ. ಇದನ್ನೇ ಹೇಳಲು ಬಂದಿದ್ದೆ; ಅಷ್ಟೇ."

ಆದರೆ ಇರೆನ್‌ಳಿಗೆ ಮಾತ್ರ ಗುಟ್ಟು ರಟ್ಟಾದುದಕ್ಕಿಂತಲೂ ಹೆಚ್ಚಿನ ಅಂತರ್ವೇದನೆಯಾಯಿತು.

   

ಇಂದು ಇಪ್ಪತ್ತನೆಯ ದಿನ. ಆ ಹೆಂಗಸು ಮತ್ತೆ ಪತ್ರ ಬರೆದು ಇನ್ನೂರು ಕ್ರೌನು ತರಿಸಿಕೊಂಡಿದ್ದಳು. ಕೇವಲ ಇದೇ ಏಳೆಂಟು ದಿನಗಳಿಂದ ಮಾತ್ರ ಅವಳ ಸುದ್ದಿ ಇರಲಿಲ್ಲ. ಆದರೆ ಅವಳ ಅಂಜಿಕೆ ಮಾತ್ರ ಇರೆನ್‌ಳ ಎದೆಯಲ್ಲಿ ಬೇರುಬಿಟ್ಟಿತ್ತು. ಅವಳು ಬೇರಾವುದನ್ನು ಯೋಚಿಸುತ್ತಿರಲಿಲ್ಲ. ಬಾಗಿಲಲ್ಲಿ ಗಂಟೆ ಬಾರಿಸಿದರೆ ತಾನೇ ತೆರೆಯಲು ಓಡುತ್ತಿದ್ದಳು. ........ಕನಿಷ್ಟ,ಆ ಹೆಂಗಸಿಗೆ ಹಣ ಕೊಟ್ಟ ರಾತ್ರಿಯಾದರೂ ಶಾಂತಿ ಸಿಕ್ಕುತ್ತದೆಂದು ಅವಳಿಗೆ ಗೊತ್ತಿತ್ತು.

ಬಾಗಿಲಲ್ಲಿ ಗಂಟೆ ಬಾರಿಸಿತು. ಇರೆನ್ ಎಂದಿನಂತೆ ಓಡಿದಳು. ಹೊರಗೆ ಹೊಸಹ್ಯಾಟು, ಬೆಲೆಬಾಳುವ 'ಗೌನು' ಧರಿಸಿದ ಒಬ್ಬ ಹೆಂಗಸು ನಿಂತಿದ್ದಳು. ಇರೆನ್‌ಳಿಗೆ ಅವಳನ್ನು ಗುರುತಿಸಲು ತಡವಾಗಲಿಲ್ಲ.

" ನಮಸ್ಕಾರ ಇರೆನ್, ನಿಮ್ಮನ್ನು ಈಹೊತ್ತು ಮನೆಯಲ್ಲಿಯೇ ಕಂಡು ನನಗಾದ ಸಂತೋಷ ಅಷ್ಟಿಷ್ಟಲ್ಲ. ನಾನೊಂದು ಅತಿ ಮಹತ್ವದ ಕೆಲಸಕ್ಕಾಗಿ ನಿಮ್ಮನ್ನು ಹುಡುಕಿಕೊಂಡು ಹೊರಟಿದ್ದೆ." ಉತ್ತರವನ್ನು ನಿರೀಕ್ಷಿಸದೆಯೇ ಅವಳು ಇರೆನ್‌ಳನ್ನು ಹಿಂದಕ್ಕೆ ಸರಿಸಿ ಮನೆಯೊಳಕ್ಕೆ ಹೋದಳು.

ಇರೆನ್ ಆವಾಕ್ಕಾದಳು. ಸ್ವಂತ ಮನೆಯಲ್ಲಿಯೂ ವಹಿಸದ ಸ್ವಾತಂತ್ರ್ಯವನ್ನು ವಹಿಸಿ ಆ ಹೆಂಗಸು ತನ್ನ ಮನೆಯಲ್ಲಿ ವರ್ತಿಸತೊಡಗಿದ್ದಳು!

ಇರೆನ್ ಮೌನವಾಗಿ ಕೋಣೆ ಸೇರಿ ಬಾಗಿಲು ಮುಚ್ಚಿಕೊಂಡಳು. ಆ ಹೆಂಗಸು ಅಷ್ಟು ಹೊತ್ತಿಗಾಗಲೇ ಅಲ್ಲಿರಿಸಿದ್ದ ಸೋಫಾದ ಮೇಲೆ ಸ್ವಸ್ಥಳಾಗಿ ಮಂಡಿಸಿದ್ದಳು. "ಓ! ಎಷ್ಟೊಂದು ಚನ್ನಾಗಿದೆ ನಿಮ್ಮ ಕೋಣೆ ಈ ಫರ್ನಿಚರು—ಈ ಚಿತ್ರ! ವ್ಹಾ ವ್ಹಾ! ಶ್ರೀಮತಿ ಇರೆನ್, ನಿಮ್ಮ ಕಲಾಭಿರುಚಿಯೂ ಚೆನ್ನಾಗಿದೆ."

ಅವಳ ಅಧಿಕಪ್ರಸಂಗತನ ಇರೆನ್‌ಳಿಗೆ ಅಸಹನೀಯವಾಗತೊಡಗಿತ್ತು ಮತ್ತೊಬ್ಬರ ಮನೆಯಲ್ಲಿ ಕರೆಯದಲೆ ಬಂದು ಮನಬಂದಂತೆ ವರ್ತಿಸುವದೆಂದರೆ? ಇರೆನ್ ತನ್ನ ಹಿಡಿತ ಕಳೆದುಕೊಂಡಳು. "ನೀನು........... ನೀನೊಬ್ಬ ಮೋಸಗಾರ್ತಿ........! ಕೊನೆಗೆ ನಿನಗೆ ಬೇಕಾದದ್ದಾದರೂ ಏನು? ಹೀಗೇಕೆ ನನ್ನ ಹಿಂದೆ ಕೈ ತೊಳೆದುಕೊಂಡು ಬೆನ್ನು ಹತ್ತಿರುವೆ........?

ಹೋಗಲಿ ನನ್ನ ಮನೆಯಲ್ಲಿ ಬರುವ ಧೈರ್ಯವಾದರೂ ಹೇಗಾಯಿತು ನಿನಗೆ...... .? ಇನ್ನು ಮುಂದೆ ನಿನ್ನ ಇಚ್ಛೆಯ ಪ್ರಕಾರ ನಾನೆಂದೂ ನಡೆಯು ಲಾರೆ. ಹುಂ! ಆಟವಾಗಿದೆ ಆಟ. ನಾನೇ ನಿಶ್ಚಯಿಸಿ ಬಿಟ್ಟಿದ್ದೇನೆ. ನಡೆದದ್ದೆಲ್ಲ....ವನ್ನು ನಾನೇ........"

"ಹಾಂ! ಹಾಂ! ಸಾವಕಾಶ. ಇಷ್ಟೊಂದು ಗಟ್ಟಿಯಾಗಲ್ಲ ಮಾತ ನಾಡುವುದು!" ಆ ಹೆಂಗಸು ನಡುವೆ ಹೇಳಿದಳು "ನಿಮ್ಮ ಮನೆಯ ಆಳು ಗಳು ಕೇಳಬಹುದು. ನನ್ನದೇನು? ನನಗೇನೂ ಚಿಂತೆಯಿಲ್ಲ. ಹೆಚ್ಚೆಂದರೆ ಜೈಲಿಗೆ ಕಳಿಸಬಹುದು. ಇಂಥ ಬಾಳುವೆ ನಡೆಸುವದಕ್ಕಿಂತ ಜೈಲು ಎಷ್ಟೋ ವಾಸಿ. ಆದರೆ ನಿಮ್ಮ ಗತಿ ಏನು? ಮಾನ! ಮರ್ಯಾದೆ!! ಸಮಾಜ!!!....?"

ಇರೆನ್‌ಳ ತುಟಿ ಬಿಳುಪೇರಿದವು. ನಗ್ನ ಸತ್ಯ ಅವಳೆದುರು ನರ್ತಿಸ ತೊಡಗಿತ್ತು.

"ನೋಡಿ" ಆ ಹೆಂಗಸು ಸಾವಕಾಶವಾಗಿ ಯಾವ ಉದ್ವೇಗವೂ ಇಲ್ಲದೆ ಹೇಳಿದಳು. "ನನಗೆ ಬರೀ ನಾಲ್ಕು ನೂರು ಕ್ರಾನು ಬೇಕಾಗಿದೆ. ಅಷ್ಟೇ; ಹೆಚ್ಚೇನಿಲ್ಲ........"

"ನಾಲ್ಕು ನೂರು!"........ "ಆದರೆ ನನ್ನ ಹತ್ತಿರ ಅಷ್ಟೊಂದು ಹಣ ಎಲ್ಲಿಂದ ಬರಬೇಕು? ಪ್ರತಿ ತಿಂಗಳು ಮನೆಯ ವೆಚ್ಚದಿಂದ ಉಳಿಸುವ ಹಣ ವನ್ನೆಲ್ಲಾ ನೀನೇ ತೆಗೆದುಕೊಂಡು ಹೋಗುತ್ತಿರುವೆ. ಇೀಗೆಲ್ಲಿಂದ ತರಲಿ?"

"ಏನಾದರೂ ಹಾದಿ ತೆಗೆಯಬಹುದು; ನಿಮ್ಮಂತಹ ಶ್ರೀಮಂತರಿಗೆ ನಾಲ್ಕು ನೂರೆಂದರೆ ಏನೂ ಅಲ್ಲ. ಇಷ್ಟು ತಿಳಿಯೆನೆ ನಾನು!"

"ಆದರೆ ನನ್ನಿಂದ ಮಾತ್ರ ಪೂರ್ಣ ಅಸಾಧ್ಯ; ನಂಬು. ಅಷ್ಟೊಂದು ಹಣ ನಿಜಕ್ಕೂ ಇಲ್ಲ. ಬಹಳವಾದರೆ ನೂರು ಕ್ರಾನುಗಳ ವರೆಗೆ ಮಾತ್ರ...."

"ನಾನು ನಿನಗೆ ಮೊದಲೇ ಹೇಳಿದ್ದೇನೆ ನನಗೆ ನಾಲ್ಕು ನೂರು ಅತ್ಯ ವಶ್ಯವಾಗಿ ಬೇಕಾಗಿದೆಯೆಂದು."

"ಆದರೆ ನನ್ನ ಹತ್ತಿರ —"

ಆ ಹೆಂಗಸು ಇರೆನ್‌ಳ ಕಡೆ ನೋಡಿ ನಡುವೆಯೇ ಬಾಯಿ ಹಾಕಿದಳು. "ನಿಮ್ಮ ಕೈಲಿದ್ದ ಉಂಗುರ! ನನ್ನ ಜೀವಮಾನದಲ್ಲಿ ಅಂತಹ ಉಂಗುರ

ಇಟ್ಟುಕೊಳ್ಳುವ ಸಂದರ್ಭ ಒದಗಿರದಿದ್ದರೂ ಅದಕ್ಕೆ ನಾಲ್ಕು ನೂರು ಕ್ರೌನು ಖಂಡಿತ ದೊರೆಯಬಹುದೆಂಬ ವಿಶ್ವಾಸ ನನಗಿದೆ.'' ಮಾತನಾಡುತ್ತಿರುವಂತೆಯೇ ಅವಳ ಮೊಗದಲ್ಲಿ ಮಂಗಚೇಷ್ಟೆಯ ಮುಗುಳುನಗೆ ಮೂಡಿ ಮೆರೆಯುತ್ತಿದ್ದಿತು.

''ಉಂಗುರ!'' ಇರೆನ್‌ಳ ಬಾಯಿಂದ ಸಣ್ಣದೊಂದು ಚೀತ್ಕಾರ ಹೊರಟಿತು. ಅದು ಮದುವೆಯಲ್ಲಿ ತನ್ನ ಪತಿಯಿಂದ ಬಂದ ಪ್ರೇಮದ ಕಾಣಿಕೆ!

"ನೀವು ನಾಲ್ಕು ನೂರು ಕೊಟ್ಟು ಬೇಕಾದಾಗ ಅದನ್ನು ಹಿಂದಿರುಗಿ ಪಡೆಯಬಹುದು."

ಇರೆನ್‌ಳಿಗೆ ಅಳುವಂತಾಯಿತು: ಆಕ್ರೋಶಿಸುವಂತಾಯಿತು; ಆರ್ಭಟಿಸುವಂತಾಯಿತು. ಆದರೂ ದೀನಳಾಗಿ ಕೇಳಿಕೊಂಡಳು. -- 'ನನ್ನ ಮೇಲೆ ನಿನಗೆ ಸ್ವಲ್ಪವೂ ದಯಬಾರದೆ? ಇಷ್ಟೊಂದು ನಿಷ್ಠುರಳಾಗಬೇಡ. ನನ್ನಿಂದ ಇನ್ನು ತಾಳಲಾಗುವದಿಲ್ಲ; ನೋಡು; ಕನಿಕರ ತೋರಿಸು.'

''ನಾನಿದು ವರೆಗೆ ಯಾರ ಮೇಲೆಯೂ ದಯ ತೋರಿಲ್ಲ. ಇನ್ನು ನಿಮಗಾಗಿ! ನಿಮ್ಮಂತಹ ಶ್ರೀಮಂತರಿಗೆ! ನಾನೊಬ್ಬ ಬಡವಿ. ನಾನೇನು ಮಾಡಬಲ್ಲೆ!''

ಇರೆನ್ ಏನೋ ಹೇಳುವವಳಿದ್ದಳು. ಆದರೆ ಹೊರಗೆ ಯಾರದೋ ನಡಿಗೆಯ ಸದ್ದು ಕೇಳಿಸಿತು. ಓ! ಅವಳ ಪತಿ ಆಫೀಸಿನಿಂದ ಮರಳುವ ಹೊತ್ತಾಗಿದೆ. ಅರಿವಿಲ್ಲದಂತೆಯೇ ಅವಳ ಕೈ ಉಂಗುರವಿದ್ದ ಬೆರಳಿಗೆ ಹೋಯಿತು; ತಾನೇನು ಮಾಡುತ್ತಿರುವೆನೆಂದು ತಿಳಿಯುವುದಕ್ಕಿಂತ ಮುಂಚಿತವಾಗಿಯೇ ಉಂಗುರ ತೆಗೆದು ಅವಳ ಕೈಲಿಟ್ಟಳು.

ಸಂಜೆಯ ಚಹ ಕುಡಿಯುವಾಗ ಎಷ್ಟು ಪ್ರಯತ್ನಿಸಿದರೂ ತನ್ನ ಬರಿಗೈಯನ್ನು ಪತಿಯಿಂದ ಮುಚ್ಚಿಡುವುದಾಗಲಿಲ್ಲ. ಅವರು ಕೇಳಿಯೇ ಬಿಟ್ಟರು. "ಇರೆನ್ ನಿನ್ನ ಉಂಗುರ ಎಲ್ಲಿ? ಬೆರಳಲ್ಲಿ ಕಾಣಿಸುವದಿಲ್ಲವಲ್ಲ!''

'ಉಂಗುರ!............' ಇರೆನ್ ಕ್ಷಣಕಾಲ ತಡವರಿಸಿದಳು. ಆದರೆ ಮರುಕ್ಷಣವೇ ಸುಧಾರಿಸಿಕೊಳ್ಳುತ್ತ ಹೇಳಿದಳು. "ಉಂಗುರ! ಅದನ್ನು

ತೊಳೆಯಲು ಕೊಟ್ಟಿದ್ದೇನೆ. ಸಾಕಷ್ಟು ಹೊಲಸಾಗಿತ್ತು. ನಾಳೆ ಇಲ್ಲವೆ ನಾಡಿದ್ದು ಸಂಜೆಯವರೆಗೆ ಬರಬಹುದು.''

ಮರುದಿನವೆಲ್ಲ ಕೋಣೆಯಲ್ಲಿಯೇ ಕಳೆಯಿತು. ಬಾಗಿಲು ಮುಚ್ಚಿತ್ತು. 'ಹೇಗೆ; ದಾರಿಯಾವುದು' ಎಂಬುದೇ ಹೊಳೆಯುತ್ತಿರಲಿಲ್ಲ. ಆ ವಿಚಾರವೇ ಅಸಹನೀಯವಾಗಿ ಕ್ಷಣಕ್ಕೊಂದು ಪಕ್ಕಕ್ಕೆ ಹೊರಳುತ್ತಿದ್ದಳು. ಬೆಳಿಗ್ಗೆ ಏಳು ಹೊಡೆಯಿತು. ಅಂದು ಸಂಜೆಯುವರೆಗೆ ಉಂಗುರ ತರಲೇ ಬೇಕಿತ್ತು. 'ಎಲ್ಲಿಂದಾದರೂ ಸರಿ! ಹೇಗಾದರೂ ಸರಿ! ಆದರೆ ಹೇಗೆ? ಎಲ್ಲಿಂದ? ಉಳಿದದ್ದೆಂದರೆ ಒಂದೇ ಹಾದಿ. ಅದೇ ಹೆಂಗಸಿನಲ್ಲಿ ಹೋಗಬೇಕು ನೂರು ಸಲ ಕೇಳಿ, ನೂರು ಸಲ ಹೇಳಿ, ನೂರು ರೀತಿಯಿಂದ ಬೇಡಿಕೊಂಡು ತರ ಬೇಕು. ಅವಳಿಗೆ ಕರುಣೆ ಬಂದರೂ ಬರಬಹುದು; ಆದರೆ ಅವಳ ವಿಳಾಸ?'

ಪಟ್ಟಣದ ಸಂದಿಗೊಂದಿಗಳಲ್ಲಿ ಹುಚ್ಚಳಂತೆ ನಿರುದ್ದೇಶವಾಗಿ ಸುತ್ತಾ ಡುವದರಲ್ಲಿಯೇ ಸಂಜೆಯಾಗತೊಡಗಿತು. ಆದರೂ ಆ ಹೆಂಗಸಿನ ಪತ್ತೆಯಾಗ ಲಿಲ್ಲ. 'ಓ! ಇದೇನು?' ಎನ್ನುತ್ತ ಅವಳು ವ್ಯಾಕುಲಳಾಗಿ ಮುಖ ಮೇಲೆ ತ್ತಿದಳು. 'ಎಲ! ಇದು ಕಾರ್ಲ್‌ನ ಮನೆ' ಅವಳಿಗೆ ಗೊತ್ತಿಲ್ಲದಂತೆಯೇ ಅವಳು ಅಲ್ಲಿಗೆ ಬಂದಿದ್ದಳು. "ಸರಿ, ಇದೂ ಒಂದು ಚನ್ನಾಯಿತು. ಹೋಗಿ ಅವನನ್ನೇ ಕೇಳಿದರೆ ತಾನೇ ತಿಳಿದು ಬಿಡುವದು. ಕಾರ್ಲ್ ತನ್ನ ಪ್ರೇಮಿ ಯೆಂದು ಆ ಹೆಂಗಸೊಮ್ಮೆ ಹೇಳಿದ್ದಳಲ್ಲವೇ!'

ಇರೆನ್ ಮೇಲೆ ಹೋಗಿ ಬಾಗಿಲು ಬಡಿದಳು.

"ಕಾರ್ಲ್ ನಾನು.... ...; ನಾನು ಇರೆನ್"

"ನೀನು.... ...ನೀನು? ನೀನೇಕೆ ಇಲ್ಲಿ ಇರೆನ್ ಇೀಗ? ನೀನು ಹೀಗೆ ಬರಬಹುದೆಂಬ ಕಲ್ಪನೆ ಕೂಡ ಇರಲಿಲ್ಲ........ಕ್ಷಮಿಸು ನಾನೀಗ ಸರಿಯಾದ ಸ್ಥಿತಿಯಲಿಲ್ಲ." ಎಂದು ಉತ್ತರ ಬಂದಿತು ಒಳಗಣಿಂದ. ಮಾತನಾಡುತ್ತ ಕಾರ್ಲ್ ಬಾಗಿಲು ಮುಚ್ಚಿಕೊಳ್ಳಲು ಯತ್ನಿಸಿದ. ಆದರೆ ಇರೆನ್ ಇದಕ್ಕೆ ಅವಕಾಶ ಕೊಡಲಿಲ್ಲ.—'ಕಾರ್ಲ್ ನಿನ್ನೊಡನೆ ಕೊಂಚ ಮಾತನಾಡಬೇಕಾ ಗಿದೆ. ನನಗೀಗ ನಿನ್ನ ಸಹಾಯವಿಲ್ಲದೆ ಗತಿಯಿಲ್ಲ'' ಅವಳು ಒಂದೇ ಉಸಿರಿ ನಲ್ಲಿ ನುಡಿಯುತ್ತಿದ್ದಳು. 'ದಯವಿಟ್ಟು ನನನ್ನು ಒಳಗೆ ಬರಗೊಡು. ಎಂ ಡೆಂದರೆ ಎರಡೇ ನಿಮಿಷದಲ್ಲಿ ಎಲ್ಲ ಹೇಳುತ್ತೇನೆ. ಆಯಿತೆ?"

ಆದರೆ............ಇರೆನ್ ನಿನಗೆ ಹೇಗೆ ಹೇಳಲಿ. ನಾನೀಗ ನಿನ್ನನ್ನು ಕಾಣುವ ಅಥವ ನಿನ್ನ ಮಾತನ್ನು ಕೇಳುವ ಸ್ಥಿತಿಯಲಿಲ್ಲ. ಮನಸ್ಸು ವ್ಯಸ್ತ ವಾಗಿದೆ. ನಾನು ಕೇಳಿಯಾದರೂ ಏನು ಮಾಡಬಲ್ಲೆ ? "

'ನಿಷ್ಕರುಣಿ........! ತೆಗೆ ಬಾಗಿಲು ! ಎಲ್ಲವನ್ನೂ ಕೇಳಲೇಬೇಕು; ಎಲ್ಲಾ ತಪ್ಪು ನಿನ್ನದೇ........ ನೀನೇ ಇದನ್ನು ಸರಿಪಡಿಸಬೇಕು. ಹೇಗಾದರೂ ಸರಿ; ನನ್ನ ಉಂಗುರವನ್ನು ಮರಳಿ ಕೊಡಿಸಲೇಬೇಕು...............! ಹೋಗಲಿ; ಅವಳು ಇರುವದೆಲ್ಲಿ. ಅದಾದರೂ ಹೇಳು. ''

ಬಾಗಿಲು ತೆರೆಯಿತು ಕಾರ್ಲ್ ಮುಂಕಾಗಿ ನಿಂತು ಬಿಟ್ಟ.

" ಓ ! ನಿನಗಿನ್ನೂ ನನ್ನ ಮಾತು ತಿಳಿಯಲಿಲ್ಲವೇನೋ ! ನನಗಿಂತ ಮೊದಲು ಪ್ರೇಮಿಸಿದ್ದೆಯಲ್ಲ. ಆ ಹೆಂಗಸಿನ ಮಾತು ನಾನೀಗ ಹೇಳುತ್ತಿರುವುದು. ಒಂದು ದಿನ ಅವಳು ನನ್ನನ್ನು ಇಲ್ಲಿಯೇ ಹಿಡಿದಿದ್ದಳು. ಆ ದಿನದಿಂದ ಅವಳ ಹೆಣಕ್ಕೆ ಎಷ್ಟೋ ಹಣ ತೆತ್ತಿದ್ದೇನೆ....ಬಾಳು ಬೇಸರವಾಗಿ ಬಿಟ್ಟಿದೆ........ಸಾಯಬೇಕಾದರೂ ಸರಿ, ನನ್ನ ಉಂಗುರವನ್ನು ನಾನು ಪಡೆಯಲೇಬೇಕು........ಅವಳು ಇರುವದೆಲ್ಲಿ ? ಇಷ್ಟೇ ಹೇಳಿಬಿಡು........! "

" ಆದರೆ........''

' ನನಗೆ ಸಹಾಯ ಮಾಡುವ ಇಚ್ಛೆ ಇದೆಯೇ ಇಲ್ಲವೆ ನಿನಗೆ ? '

'........ನಾನು ನಿಜ ಹೇಳುತ್ತೇನೆ, ಇರೆನ್. ಆ ಹೆಂಗಸನ್ನು ನಾನರಿಯೆ. ನನಗಾವ ಮೋಸಗಾರ್ತಿಯರ ಪರಿಚಯವಿಲ್ಲ.'

'ನಿನಗೆ ಗೊತ್ತಿಲ್ಲವೆ? ಹಾಗಾದರೆ ಅವಳು ಇದೆಲ್ಲವನ್ನೂ ತಾನಾಗಿಯೇ ಹುಟ್ಟಿಸಿದ್ದಾಳೆಯೆ ? ನನ್ನ ಹೆಸರು, ನನ್ನ ಮನೆ ಕೂಡ ಗೊತ್ತಾಗಿದೆ ಅವಳಿಗೆ........! ಇೀಗ ಅವಳು ಮೋಸಗಾರ್ತಿಯೇ ಅಲ್ಲವೆಂದು ಅನ್ನಬಹುದು ನೀನು ! '

ಇರೆನ್ ಗಟ್ಟಿಯಾಗಿ ನಕ್ಕಳು. ಅವಳ ಕಣ್ಣುಗಳಲ್ಲಿ ವಿಚಿತ್ರ ಹೊಳಪು ಕಂಡು ಬರುತ್ತಿತ್ತು. ಕಾರ್ಲ್ ಬೆದರಿದ. ಚಿಂತಾತುರನಾಗಿ ಅವಳ ಕಡೆ ನೋಡುತ್ತ ಹೇಳಿದ. ' ಇರೆನ್ ನನ್ನನ್ನು ನಂಬು. ಇಂಥ ಯಾವ ಸ್ತ್ರೀಯ ಪರಿಚಯವೂ ನನಗಿಲ್ಲ, ನನ್ನ ಮೇಲೆ ವಿಶ್ವಾಸವಿಡು. '

ಹಾಗಾದರೆ ನಿನ್ನಿಂದ ಸಹಾಯ ಒದಗುವುದಿಲ್ಲವೆಂದು ತಿಳಿಯಲೇ?' ಅವಿಶ್ವಾಸದ ದನಿಯಲ್ಲೇ ಮತ್ತೆ ಕೇಳಿದಳು ಇರೆನ್!

'ಹಾಗಲ್ಲ ಇರೆನ್. ಹುಚ್ಚಳಾಗಬೇಡ. ನನ್ನಿಂದ ಸಾಧ್ಯವಾದ ಎಲ್ಲ ಸಹಾಯವನ್ನೂ ಒದಗಿಸಲೂ ಸಿದ್ಧನಿದ್ದೇನೆ ಆದರೆ........'

'ಹಾಗಾದರೆ ನಡೆ; ನಾವಿಬ್ಬರೂ ಕೂಡಿಯೇ ಅವಳ ಮನೆಗೆ ಹೋಗೋಣ.'

ಕಾರ್ಲ್‌ನಿಗೆ ಎಲ್ಲಿಲ್ಲದ ನಗು ಬಂದಿತು. ಆದರೆ ಅದು ನಗುವ ಸಮಯವಲ್ಲವೆಂದೂ ಆತ ಬಲ್ಲ. ಬಹಳ ಪ್ರಯಾಸದಿಂದ ನಗು ತಡೆದು ಗಂಭೀರನಾಗುತ್ತ ಹೇಳಿದ 'ಕ್ಷಮಿಸು ಇರೆನ್. ಇೀಗ ನನ್ನಿಂದ ಸಾಧ್ಯವಿಲ್ಲ; ಏನು ಮಾಡುವದಕ್ಕೂ ನನ್ನಲ್ಲಿ ಉತ್ಸಾಹವಿಲ್ಲವೀಗ.'

ಇರೆನ್‌ಳಿಗೆ ಎಲ್ಲಿಂದ ಅಷ್ಟು ಬಲ ಬಂದಿತ್ತೋ! ಬಾಗಿಲಲ್ಲಿದ್ದ ಕಾರ್ಲ್‌ನನ್ನು ನೂಕಿ ಒಳಗೆ ಹೋದಳು. ಕಾರ್ಲ್ ತಡೆಯಲು ಯತ್ನಿಸಿದ. ಸಾಧಿಸಲಿಲ್ಲ. ಒಳಗಿನ ಕೋಣೆಯ ಮಂಚದ ಮೇಲೆ ಒಬ್ಬ ಹೆಂಗಸು ಮಲಗಿದ್ದಳು. ಇರೆನ್‌ಳನ್ನು ಕಂಡು ಅವಳು ಅವಸರದಿಂದ ಏಳುತ್ತ ಅಸ್ತವ್ಯಸ್ತವಾಗಿದ್ದ ಬಟ್ಟೆಗಳನ್ನು ಸಾವರಿಸಿಕೊಳ್ಳತೊಡಗಿದಳು. ಇರೆನ್‌ಳ ಮುಖದ ಮೇಲೆ ಆವೇಶ ತಾಂಡವವಾಡತೊಡಗಿತ್ತು. "ಓ! ನೀನೂ ಇಲ್ಲಿಯೇ ಇರುವೆಯಾ? ಚೆನ್ನಾಯಿತು ಇಬ್ಬರೂ ಕೂಡ ಒಳ್ಳೇ ಪುಣ್ಯದ ಕೆಲಸ ಕೈಕೊಂಡಿರುವಿರಿ." ಇರೆನ್ ಬಳಿ ಸಾರಿ ಹೋದಳು. ಆದರೆ, ಅವಳು ಬೇರೊಬ್ಬ ಹೆಂಗಸು! ಪೂರ್ಣ ಅಪರಿಚಿತೆ! ಇರೆನ್ ನಿರ್ವಿಣ್ಣಳಾಗಿ ಹಿಂತಿರುಗುತ್ತ ಹೇಳಿದಳು. "ಕ್ಷಮಿಸು ಕಾರ್ಲ್........ನನಗೆ ನಿಜಕ್ಕೂ ಪ್ರಾಣಕ್ಕೆ ಬಂದಿದೆ.........ಆಗಲಿ, ನಾನೇ ಎಲ್ಲವನ್ನೂ ಹೇಳಿಬಿಡುವೆ........! ಎಲ್ಲವನ್ನೂ! ಏನೂ ಮುಚ್ಚಿಡುವದಿಲ್ಲ.... ಎಷ್ಟೆಂದು ತಾಳುವದು?"

   

ಅದೇ ಗುಂಗಿನಲ್ಲಿಯೇ ಅವಳು ಔಷಧದ ಅಂಗಡಿಗೆ ಹೋಗಿ ಕಾಗದದ ಒಂದು ತುಂಡನ್ನು ಅಂಗಡಿಯವನಿಗೆ ತೋರಿಸಿದಳು. ಅವನು ಒಂದು ಸೀಸೆಯನ್ನು ಅವಳ ಮುಂದೆ ಇಡುತ್ತ ಹೇಳಿದ— 'ಎರಡು ಕ್ರಾನು, ಮೆಡಮ್.'

ಇರೆನ್ ಕನಸಿನಿಂದೆಚ್ಚತ್ತಳು. ಸೀಸೆಯ ಮೇಲೆ ಕೆಂಪಕ್ಕರಗಳಲ್ಲಿ ಬರೆದ ವಿಷ (Poison), ಅವಳ ಕಣ್ಣುಗಳಲ್ಲಿ ತುಂಬಿ ಬಂತು. ಅವಳು ಪರ್ಸಿನಲ್ಲಿ ಕೈ ಹಾಕಿದಳು. ಆದರೆ ಅದೇ ಕ್ಷಣದಲ್ಲಿ ತನ್ನ ಹೆಗಲ ಮೇಲೆ ಯಾರೋ ಕೈಯಿಟ್ಟ ಅನುಭವವಾಯಿತು. ಮರುಕ್ಷಣದಲ್ಲಿ ಯಾರೊ ಅಂಗಡಿಯವನಿಗೆ ಹಣಕೊಟ್ಟು ಸೀಸೆ ಎತ್ತಿಕೊಂಡರು. ಇರೆನ್ ಮೆಲ್ಲನೆ ತಿರುಗಿದಳು, ಇರೆನ್‌ಳ ರಕ್ತ ಹೆಪ್ಪುಗಟ್ಟಿತು. ಆತ ಅವಳ ಪತಿ !

ಸೀಸೆಯನ್ನು ಕಿಸೆಗೆ ಸೇರಿಸುತ್ತ 'ನಡೆ ಹೋಗೋಣ' ಎಂದನಾತ ಅವಳು ಏನೂ ಮಾತನಾಡದೆ ಆತನನ್ನು ಹಿಂಬಾಲಿಸಿದಳು. ದಾರಿಯಲ್ಲೆಲ್ಲ ಮೌನ. ಕೋಣೆ ಸೇರಿದ ಮೇಲೂ ಆ ಮೌನ ಮುರಿಯಲಿಲ್ಲ. ಅವಳ ಪತಿ ತಾನೇ ಎದ್ದು ಬಾಗಿಲು ಮುಚ್ಚಿದರು ಆದರೂ ಅವಳು ತುಟಿ ಎರಡು ಮಾಡಲಿಲ್ಲ. ಸೀಸೆಯನ್ನು ಕಿಟಕಿಯಿಂದ ಹೊರಗೊಗೆದು ಸ್ನೇಹದಿಂದ ಅವಳ ಕಡೆ ನೋಡುತ್ತ ಹೇಳಿದರು. "ಇರೆನ್ ನೀನೇ ಹೇಳು. ಎಲ್ಲಿಯವರೆಗೆ ನನ್ನನು ಕೊರಗಿಸುವೆ ?"

ಇರೆನ್ ಇೀಗಲೂ ಏನೂ ಹೇಳಲಿಲ್ಲ. ಆ ಅಕಲ್ಪಿತ ಸ್ನೇಹದ ಆಕಸ್ಮಿಕ ಪ್ರದರ್ಶನದಿಂದ ಅವಳು ಮೂಕಳಾಗಿದ್ದಳು. ಪರಿಸ್ಥಿತಿ ಅವಳ ಹವಣು ಮೀರಿದಂತಿತ್ತು.

"ಇರೆನ್, ಇರೆನ್" ಸ್ವರದಲ್ಲಿ ಮೊದಲಿನ ಒಲುಮೆ ಹಾಗು ಸ್ನೇಹದ ಸಮ್ಮೋಹಕ ಮಾಧುರ್ಯವಿತ್ತು.

ಇರೆನ್‌ಳಿಂದ ತಡೆಯುವುದಾಗಲಿಲ್ಲ. ಮುಂದುವರಿದು ತನ್ನ ಪತಿಯ ವಿಶಾಲ ಎದೆಯಮೇಲೆ ಮುಖವಿಟ್ಟು ಬಿಕ್ಕಳಿಸತೊಡಗಿದಳು. ಧಾರಾಕಾರವಾಗಿ ಅಶ್ರುಗಳನ್ನು ವರ್ಷಿಸತೊಡಗಿದಳು.

"ಇರೆನ್, ಇೀಗಂತೂ ಎಲ್ಲವೂ ಮುಗಿದಿದೆ. ಇನ್ನು ಮೇಲೆ ಆ ಹೆಂಗಸು ನಿನ್ನಲ್ಲಿ ಬರುವದಿಲ್ಲ. ನಿನಗೆ ತೊಂದರೆ ಕೊಡುವುದಿಲ್ಲ." ನೀರೂರಿದ ಕಣ್ಣುಗಳಲ್ಲಿ ಆಶ್ಚರ್ಯ, ಭಯ, ಅಗಾಧ ಉದ್ವೇಗಗಳನ್ನು ತುಂಬಿಕೊಂಡು ಅವಳು ತನ್ನ ಗಂಡನ ಕಡೆಗೆ ನೋಡಿದಳು. "ನಿಜವಾಗಿಯೂ ಇರೆನ್. ಆ ಹೆಂಗಸು ಇನ್ನು ಮೇಲೆ ನಿನ್ನ ಕಡೆ ಬರುವದಿಲ್ಲ....ನಿನ್ನ ಮತ್ತು ಕಾರ್ಲ್‌ನ

ಪಿಸುಮಾತು ಹರಡುತ್ತ ನನ್ನ ಕಿವಿಯ ವರೆಗೆ ಬಂದಾಗ ನನಗೆಷ್ಟು ದುಃಖ ವಾಗಿರಬೇಕು! ನೀನು ಒಮ್ಮೆಯಾದರೂ ಯೋಚಿಸಿದೆಯಾ? ಕಾಲ ಹೋದಂತೆ ನೀನಾಗಿ ಒಳ್ಳೆಯ ಹಾದಿಗೆ ಬರಬಹುದೆಂದು ತಿಳಿದಿದ್ದೆ. ಆದರೆ ನೀನೇನೂ ಮರಳಲಿಲ್ಲ. ನಿನ್ನನ್ನು ಹಾದಿಯ ಮೇಲೆ ತರಲು ಇಷ್ಟೆಲ್ಲಾ ನಾಟಕವಾಡಬೇಕಾಯಿತು. ಅವಳು ಒಬ್ಬ ನಟಿ. ಬಹಳ ಪ್ರಯಾಸದಿಂದ ಈ ಕೆಲಸಕ್ಕಾಗಿ ಒಪ್ಪಿಸಿದ್ದೆ. ಕಡೆಗೂ ನನ್ನ ಉದ್ದೇಶ ಈಡೇರಿತು. ಕಾರ್ಲ್‌ನ ಪ್ರೇಮದ ನಗ್ನರೂಪವನ್ನು ನೀನೇ ನೋಡಿರುವೆ. ಈಗ ನನಗೆ ಕಳೆದು ಹೋದುದರ ಬಗ್ಗೆ ಎಷ್ಟೂ ಚಿಂತೆಯಿಲ್ಲ........" ಅವರ ಧನಿಯಲ್ಲಿ ದೃಢತೆ ಯಿತ್ತು. ಪಶ್ಚಾತ್ತಾಪದ ಬೇಗೆಯಿಂದ ಕರಗುತ್ತಿದ್ದ ಇರೆನ್‌ಳನ್ನು ತಮ್ಮ ತೋಳುಗಳಲ್ಲಿ ಹಿಡಿದುಕೊಂಡು ಅವರು ಹೊಸ ವಿಶ್ವಾಸದುದಯದ ದಾರಿ ನೋಡುತ್ತಿದ್ದರು.

ಇರೆನ್‌ಳ ಹಗುರವಾದ ಹೃದಯದಿಂದ ಮೆಲ್ಲನೆ ಒಂದು ಮಾತು ಹೊರಬಿತ್ತು. "ದೇವ! ಎಷ್ಟೊಂದು ಕ್ಷಮೆಯಿದೆ ನಿನ್ನ ಈ ಸೃಷ್ಟಿ ಯಲ್ಲಿ" ಎಂದು!

('Fear' ಕತೆಯ ಛಾಯಾನುವಾದ)



೨

# ಅದೃಶ್ಯ ಚಿತ್ರ ಸಂಗ್ರಹ



ಡ್ರೆಸ್‌ಡನ್‌ದ ಎರಡನೆಯ ಜಂಕ್ಶ್ಯನ್ನಿಗೆ ಗಾಡಿ ಬಂದ ಕೂಡಲೇ ವೃದ್ಧರೊಬ್ಬರು ನನ್ನ 'ಕಂಪಾರ್ಟಮೆಂಟ್' ಏರಿದರು. ಪೂರ್ವ ಪರಿಚಿತ ರಂತೆ ನನಗೆ 'ನಮಸ್ಕಾರ'ವೆಂದಾಗ ದಿಗಿಲುಗೊಂಡು ಅವರ ಕಡೆ ನೋಡಿದೆ. ಅವರಿಗೆ ತಿಳಿಯಿತು; ತಮ್ಮ ಹೆಸರು ಹೇಳಿದರು. ಆಗ ನಾನು ಗುರುತಿಸಿದೆ. ಅವರು ಬರ್ಲಿನ್‌ದ ಪ್ರಸಿದ್ಧ ಕಲಾ ವಿಮರ್ಶಕರು. ಚಿತ್ರದ ವ್ಯಾಪಾರಿಗಳು. ಅವರಿಂದ ನಾನದೆಷ್ಟೊ ಅಮೂಲ್ಯ ಸಂಗ್ರಹಗಳನ್ನು ಕೊಂಡಿದ್ದೆ.

ಎದುರಿಗೆ ತೆರವಿದ್ದ 'ಬರ್ಥ'ನ ಮೇಲೆ ಅವರು ಉಸ್ಸೆಂದು ಕುಳಿತರು. ಕೆಲಹೊತ್ತು ಶಿಷ್ಟಾಚಾರದ ಮಾತುಕತೆ ನಡೆಯಿತು. ಮಾತು ಬದಲಿಸುತ್ತ ಅವರು ತಮ್ಮ ಪ್ರಯಾಣದ ಕಾರಣವನ್ನು ಹೇಳಿದರು. ಮೂವತ್ತೇಳು ವರ್ಷ ಚಿತ್ರಗಳ ವ್ಯಾಪಾರವನ್ನೇ ಮಾಡಿದ ಅವರ ಜೀವನದಲ್ಲಿ ಆ ಅನುಭವ ವಿಚಿತ್ರವಾಗಿತ್ತು. ವಿಸ್ಮಯಕಾರಕವಾಗಿತ್ತು.

ಕಥೆಯೂ ಸಾಕಷ್ಟು ದೊಡ್ಡದು. ಅದನ್ನು ಅವರ ಮಾತಿನಲ್ಲಿಯೇ ಹೇಳುವದು ಉತ್ತಮ:—

"ನಿಮಗೆ ತಿಳಿಯದೆ ಇಲ್ಲ"—(ಅವರು ಹೇಳಿದರು)—"ನಮ್ಮ ದೇಶದ ನಾಣ್ಯಗಳ ಬೆಲೆ ಕಡಿಮೆಯಾಗತೊಡಗಿದೆ. ಯುದ್ಧಕಾಲದಲ್ಲಿ ಆದೇಕೋ ಶ್ರೀಮಂತರೆಲ್ಲರೂ ಹಳೆಯ ಕಲಾವಿದರ ಚಿತ್ರಗಳನ್ನೇ ಬೇಡುತ್ತಿದ್ದಾರೆ. ಅವರ ಬೆಳೆಯುತ್ತಿರುವ ಬೇಡಿಕೆಗೆ ಚಿತ್ರಗಳನ್ನೊದಗಿಸುವುದೇ ಕಷ್ಟವಾಗ ತೊಡಗಿದೆ. ನನ್ನದೇನೋ ಬೇರೆ ಸ್ವಭಾವ. ಒಳ್ಳೇ ವಸ್ತುಗಳೆಲ್ಲವೂ ನನ್ನ ಲ್ಲಿಯೇ ಇರಬೇಕೆಂಬ ಆಶೆ. ಮುಂದೆ ಎಂದಾದರೂ ಬೇಸರವಾದಾಗ ನೋಡಿ ಸಂತೋಷಪಡಬಹುದು—. ಆದರೆ ನನ್ನ ಮನೆ ಅದರಿಂದಲೂ ವಂಚಿತ ವಾಗತೊಡಗಿದೆ. ಏನೇನೂ ಉಳಿದಿಲ್ಲ. ನಾನು ಅಡ್ಡಿ ಮಾಡದಿದ್ದರೆ ನಾನು

ತೊಟ್ಟಿರುವ ಅಂಗಿಯ ಗುಂಡಿಗಳು ಕೂಡಿ ಮಾರಾಟವಾಗಬಲ್ಲುವು. ಕಲಾತ್ಮಕ ಚಿತ್ರಗಳನ್ನು 'ವಸ್ತು'ಗಳೆಂದು ಕರೆಯುವುದು ನಿಮಗೆ ಕೆಡಕೆನಿಸಬಹುದು. ಆದರೆ ಬರುವ ಗಿರಾಕಿಗಳೆಲ್ಲರೂ ಹೀಗೆಯೇ ಕೇಳುತ್ತಾರೆ. ತೀರ ಹಳೇ ಗ್ರಂಥಗಳು ಕೂಡ ಕಲ್ಪನೆ ಮೀರಿದ ಬೆಲೆಯಲ್ಲಿ ಮಾರಿ ಹೋದವು.

ಈಗಿನ ಈ ಶ್ರೀಮಂತರ 'ಹೊಸ' ಆಶೆಯೂ ಅಸಾಧ್ಯ—! ಹಣ ಹಾಳು ಮಾಡುವುದರಲ್ಲಿ ಇವರ ಕೈ ಹಿಡಿದವರಾರೂ ಇಲ್ಲ........! ಒಂದು ದಿನ ನಾನು ಅಂಗಡಿಯ ತನಿಖೆ ಮಾಡಿದೆ. ಏನೊಂದೂ ಉಳಿದಿರಲಿಲ್ಲ. ಅಂಗಡಿ ಮುಚ್ಚುವ ಪ್ರಸಂಗವಿತ್ತು; ಬಹಳ ಕೇಡಕೆನ್ನಿಸಿತು. ಆದರೆ ಮಾಡುವುದೇನು? ಉಳಿದ ವಸ್ತುಗಳು ತೀರ ಕ್ಷುಲ್ಲಕವಾದುವು. ೧೯೧೪ಕ್ಕಿಂತ ಮುಂಚೆ ಅವನ್ನು ಮಾರಲು ರಸ್ತೆಯ ಮೇಲೆ ತಿರುಗುವ ಗಾಡಿಯವನೂ ಕೂಡ ನಾಚುತ್ತಿದ್ದ.

ಇದೇ ತಿಕ್ಕಾಟದಲ್ಲಿ ನಾನು ನಮ್ಮ ಖಾತೆಯ ಪುಟ ತಿರುವ ತೊಡಗಿದೆ. ಏನೋ ಯಾವುದಾದರೂ ಗಿರಾಕಿಯಿಂದ ನಾನು ಮಾರಿದ ಚಿತ್ರಗಳನ್ನೇ ಮರಳಿ ಪಡೆಯಬಹುದೇ ಎಂದು. ಅಂಥ ಗಿರಾಕಿಗಳಿಗೂ ಕೊರತೆ ಇರಲಿಲ್ಲ. ಕೈ ನಡೆಯುತ್ತಿದ್ದಾಗ ಒಳ್ಳೇ ಆಧ್ಯತೆಯಿಂದ ಕೊಂಡು, ಮುಂದೆ ಬಡತನ ಬಂದಾಗ ಅವುಗಳನ್ನು ಮಾರುವವರೂ ಇದ್ದರು. ಅಕಸ್ಮಾತ್ ಒಬ್ಬ ವೃದ್ಧರ ಪತ್ರಗಳ ಕಟ್ಟೊಂದು ಕೈಗೆ ಸಿಕ್ಕಿತು ಅವರನ್ನು ನಾನು ಸಂಪೂರ್ಣ ಮರೆತೇ ಬಿಟ್ಟಿದ್ದೆ. ಕಾರಣವಿಷ್ಟೆ—೧೯೧೪ ರಿಂದ ಅವರು ಒಂದೂ ಚಿತ್ರವನ್ನು ಕೊಂಡಿರಲಿಲ್ಲ. ಹೀಗಾಗಿ ನನ್ನ ಮತ್ತು ಅವರ ಸಂಬಂಧ ನಿಂತುಹೋಗಿತ್ತು. ಎಲ್ಲಕ್ಕಿಂತಲೂ ಹಳೆಯ ಪತ್ರ ಸುಮಾರು ೬೫ ವರುಷಗಳ ಹಿಂದಿನದು.

ಹಳೆಯ ಸಂಪ್ರದಾಯದ ವ್ಯಕ್ತಿಗಳಾಗಿರಬಹುದು, ಅವರು. ಅವರ ಪತ್ರಗಳೆಲ್ಲವೂ ಹಳೆಯ ರೀತಿಯಲ್ಲೇ ಬರೆಯಲ್ಪಟ್ಟಿದ್ದುವು. ಪ್ರತಿಯೊಂದು ಚಿತ್ರದ ಹೆಸರಿನ ಕೆಳಗೆ ಕೆಂಪು ಮಸಿಯಿಂದ ಎರಡು ಗೀಟು ಎಳೆದು ಅದರ ಬೆಲೆ ಅಂಕಿಯಲ್ಲಿಯೂ, ಅಕ್ಷರದಲ್ಲಿಯೂ ಬರೆಯಲಾಗಿತ್ತು, ಕೆಳಗೆ ಅವರ ಹೆಸರು; ಹೆಸರಿನ ಮುಂದೆ ಬಿರುದು–ಬಾವಲಿ. "ಅರಣ್ಯಗಳ ಅಧಿಕಾರಿಗಳು........ಮಾಜಿ ಆರ್ಥಿಕ ಸಲಹೆಗಾರರು .......ಮಾಜಿ ಲೆಫ್ಟನೆಂಟ್........ ಮುಂತಾಗಿ........" ೧೮೭೦—೭೧ ರ ಯುದ್ಧದ ಅಧಿಕಾರಿಗಳವರು. ಇವೆಲ್ಲ

ಕಾರಣದಿಂದ ಅವರು ಸುಮಾರು ಎಂಭತ್ತು ವರ್ಷದವರಿರಬಹುದೆಂದು ಊಹಿಸಿದೆ.

ಪತ್ರಕ್ಕಾಗಿ ಅವರು ಉಪಯೋಗಿಸಿದ ಕಾಗದ ಲಕ್ಕೋಟೆಗಳಿಂದ ಜಿಪುಣರೆಂದು ಕಂಡು ಬಂದರೂ ಅವರ ಚಿತ್ರದ ಆಯ್ಕೆ—ಅವರಲ್ಲಿ ಕಲೆಯ ಬಗ್ಗೆ ಸಾಕಷ್ಟು ಜ್ಞಾನವಿದೆಯೆಂದು ಹೇಳುತ್ತಿತ್ತು. ಅವರ ಆರ್ಡರ್‌ಗಳನ್ನು ಒಂದೊಂದಾಗಿ ನೋಡತೊಡಗಿದೆ. ಸಣ್ಣ ಬೆಲೆಯಲ್ಲಿಯೇ ಅವರು ಎಷ್ಟೋ ಉತ್ತಮ ಚಿತ್ರಗಳನ್ನು ಕೊಂಡಿದ್ದರು. ಅವೆಲ್ಲವುಗಳ ಬೆಲೆ ಇೀಗ ಯುದ್ಧ ಕಾಲದಲ್ಲಿ ಲಕ್ಷಾನುಗಟ್ಟಲೆ ಹಣ ಗಳಿಸಿದವರ ಹಣಕ್ಕಿಂತ ಹೆಚ್ಚಾಗುತ್ತಿತ್ತು. ನನ್ನೊಬ್ಬನಿಂದಲೇ ಇಷ್ಟು ಕೊಂಡಿರುವಾಗ ಇನ್ನೊಬ್ಬರಿಂದಲೂ ಕೊಂಡ ಚಿತ್ರಗಳಿರಬೇಕು ಅವರಲ್ಲಿ ಎಂಬ ವಿಚಾರ ಸಹಜವಾಗಿ ಮೂಡಿತು.

‘ ಹಾಗಾದರೆ ಆ ಚಿತ್ರಗಳ ಸಂಗ್ರಹವೆಲ್ಲಿ? ಆ ಅಮೂಲ್ಯ ಸಂಗ್ರಹ ಬೇರೆಯವರ ಕೈಗೆ, ನನಗೆ ಗೊತ್ತಾಗದೆ, ಹತ್ತುವುದೇ ಅಸಂಭವವಾಗಿತ್ತು. ಅವರು ಮೃತರಾಗಿದ್ದರೆ, ಆ ಸಂಗ್ರಹ ಅವರ ಉತ್ತರಾಧಿಕಾರಿಗಳಲ್ಲಿ ಇರಲೇ ಬೇಕು........”

ನಾನು ಅದೇ ದಿನ ರಾತ್ರಿ ಆ ಊರಿಗೆ ಹೋದೆ. ಪೋಷ್ಟಿನಲ್ಲಿ ಕೇಳಲು ಅವರು ಜೀವಂತ ಇದ್ದಾರೆಂದು ತಿಳಿಯಿತು. ಮನೆಯ ವಿಳಾಸ ಹುಡುಕಿ ತೆಗೆದು ಮಧ್ಯಾಹ್ನ ಅವರ ಮನೆಯ ಕಡೆಗೆ ಹೊರಟೆ. ಮನಸ್ಸು ಸಂತೋಷದಿಂದ ಕುಣಿಯತೊಡಗಿತ್ತು.

ಅದೊಂದು ಹಳೆಯ ಕಾಲದ ಮನೆ; ಮೊದಲನೆ ಅಂತಸ್ತಿನಲ್ಲಿ ದರ್ಜಿ ಇರುತ್ತಿದ್ದ; ಎರಡನೆ ಅಂತಸ್ತಿನ ಬಲಗಡೆ ಪೋಷ್ಟ ಮಾಸ್ತರರ ಮನೆ; ಎಡ ಗಡೆ ಬಾಗಿಲ ಮೇಲೆ ಅದೇ ಉದ್ದವಾದ ಹೆಸರು ! ಕೊನೆಗೂ ನಾನು ಅವ ರನ್ನು ಬಿಡಲಿಲ್ಲ.

ಗಂಟೆ ಬಾರಿಸಿದೆ. ಕೂದಲೆಲ್ಲವೂ ಬೆಳ್ಳಗಾದ ವೃದ್ಧೆಯೊಬ್ಬರು ಬಾಗಿಲು ತೆರೆದರು. ನನ್ನ ಹೆಸರಿನ ಕಾರ್ಡು ಕೊಡುತ್ತ ಯಜಮಾನರು ಮನೆಲ್ಲಿದ್ದಾ ರೆಯೇ ? ಎಂದು ಕೇಳಿದೆ. ಅವರು ಸಂಶಯದಿಂದ ನನ್ನ ಕಡೆ ನೋಡಿದರು. ಅಂಥ ಸಣ್ಣ ಹಳ್ಳಿಗಳಲ್ಲಿ ಪಟ್ಟಣದಿಂದ ಯಾರಾದರೂ ಬರುವುದು ಸಾಮಾನ್ಯ ಮಾತಾಗಿರಲಿಲ್ಲ. ಸಾಕಷ್ಟು ಸೌಜನ್ಯದಿಂದ ಅವರು ನನ್ನನ್ನು ನಿರೀಕ್ಷಿಸಿ

ಕೂಡಹೇಳಿ ಒಳಗೆ ಹೋದರು. ಒಳಗೆ ಗುಸು ಗುಸು ಮಾತಾಯಿತು. ಒಮ್ಮೆಲೆ ದೊಡ್ಡ ಸ್ವರದಲ್ಲಿ "ಯಾರು ಬರ್ಲಿನದಿಂದ 'ಹೆರ್ ರಾಕನರ್' ಬಂದಿದ್ದಾರೆಯೇ ? ಅವಶ್ಯವಾಗಿ ಭೆಟ್ಟಿಯಾಗುವೆ; ಒಳಗೆ ಕಳಿಸಿಕೊಡು." ವೃದ್ಧೆ ಬಂದು ನನ್ನನ್ನು ಒಳಗೆ ಬರಹೇಳಿದಳು.

ಓವರಕೋಟು ತೆಗೆದಿಟ್ಟು ನಾನು ಅವಳನ್ನು ಹಿಂಬಾಲಿಸಿದೆ. ಆಡಂಬರ ವಿಲ್ಲದ ಕೋಣೆಯ ನಟ್ಟನಡುವೆ ಅವರು ನನ್ನ ಸ್ವಾಗತಕ್ಕಾಗಿ ನಿಂತಿದ್ದರು. ಅಷ್ಟು ವೃದ್ಧರಾಗಿದ್ದರೂ ಅವರ ಆರೋಗ್ಯ ಕೆಟ್ಟಿರಲಿಲ್ಲ. ಬೆಳೆದ ಮೀಸೆ, ತೊಟ್ಟ ಮಿಲಟರಿಯ ಜಾಕೀಟು ಆ ದೇಹಕ್ಕೆ ವಿಶೇಷ ಕಳೆ ಕೊಟ್ಟಿತ್ತು. ಪ್ರೇಮಾದರದಿಂದ ಅವರು ತಮ್ಮ ಎರಡೂ ಕೈಗಳನ್ನು ಮುಂದೆ ಮಾಡಿದರು. ಅವರು ತೋರಿದ ಈ ಸಹೃದಯತೆಯಲ್ಲಿ ಕೃತ್ರಿಮತೆ ಇರದಿದ್ದರೂ ಕಠೋರತೆ ಇದೆ ಎಂದೆನಿಸಿತು. ಹಸ್ತಾಂದೋಲನಕ್ಕಾಗಿ ಅವರು ಒಂದು ಹೆಜ್ಜೆ ಕೂಡ ಮುಂದಿಡಲಿಲ್ಲ. ನಿಜವಾಗಿ ಹೇಳಬೇಕಾದರೆ ನನಗೆ ಅದರಿಂದ ಕೆಡುಕೆನಿಸಿತು. ಆದರೆ ವಾಸ್ತವ ಹಾಗಿರಲಿಲ್ಲ. ಅವರು ಕುರುಡರಾಗಿದ್ದರು. ಅವರ ಕಂಣಿನ ಬೆಳಕು ನಂದಿಹೋಗಿದ್ದಿತು.

ಬಾಲ್ಯದಿಂದಲೂ ಕುರುಡರಾದವರೆಂದರೆ ನನಗೆ ಏನೋ ಸಂಕಟ! ಅವರೊಡನೆ ಮಾತಾಡಬೇಕೆಂದರೆ ಜೀವದಸುತ್ತು ಬಂದಂತಾಗುತ್ತದೆ. ಅವರು ಅಸಹಾಯ ಸ್ಥಿತಿಯಲ್ಲಿರುವಾಗ ನಾನು ಲೋಕದ ಲಾಭ ಪಡೆಯುತ್ತಿರುವೆನಲ್ಲ ಅನಿಸುತ್ತದೆ. ಆಗಲೂ ಕೂಡ ಹಾಗೆಯೇ ಆಯಿತು. ಎಡೆಬಿಡದೆ ಅಲೆದಾಡುತ್ತಿದ್ದ ಅವರ ಕರಿಗುಡ್ಡೆಗಳನ್ನು ಕಂಡು ಎದೆಯಲ್ಲಿ ಸಂಕಟ ತುಂಬಿ ಬಂದಂತಾಯಿತು. ಆದರೆ ಆ ಸ್ಥಿತಿಯಿಂದ ಶೀಘ್ರವೇ ಪಾರಾದೆ. ಅವರು ಸಂತುಷ್ಟತೆಯಿಂದ ಮುಗುಳುನಗೆ ನಗುತ್ತ ಹೇಳಿದರು:—

"ನಿಜವಾಗಿಯೂ ನನಗೆ ಈ ದಿನ ಹಬ್ಬ. ನೀವು ಬರ್ಲಿನ್‌ದಿಂದ ಇಲ್ಲಿಗೆ ಬರುವದೇನೂ ಸಾಮಾನ್ಯವಲ್ಲ........ ನೀವು ಇಲ್ಲಿಗೆ ಬಂದ ಕಾರಣ ನನಗೆ ಗೊತ್ತು. ವ್ಯಾಪಾರ ಬಹಳ ಮುಂದವಾಗಿದೆಯೆಂದು ಕೇಳಿದ್ದೇನೆ. ಖರೀದಿಯೇ ಇಲ್ಲವಂತೆ! ವ್ಯಾಪಾರಸ್ಥರು ತಮ್ಮ ಹಳೇ ಗಿರಾಕಿಗಳನ್ನು ಹುಡುಕಿಕೊಂಡು ಹೋಗುತ್ತಿದ್ದಾರಂತೆ! ನೀವೂ ಸಹ ಇಲ್ಲಿಂದ ನಿರಾಶರಾಗಿ ಮರಳಬೇಕಾಗುತ್ತದೆ. ನಿಮ್ಮನ್ನು ಹಾಗೇ ಕಳಿಸುವಾಗ ನನಗೆ ಆಗುವ

ದುಃಖವೂ ಅಷ್ಟಿಷ್ಟಲ್ಲ. ಮಾಡುವುದೇನು? ಬರುವ ಪೆನ್‌ಶನ್ ಒಪ್ಪೊತ್ತಿನ ಅನ್ನಕ್ಕೆ ಸಾಲುವದಿಲ್ಲ. ಚಿತ್ರಗಳಿಗೆ ಹಣವೆಲ್ಲಿ? ಕೈ ನಡೆಯುತ್ತಿದ್ದಾಗ ಸಾಕಷ್ಟು ಸಂಗ್ರಹಿಸಿದೆ. ಈಗ ಹಾಗಿಲ್ಲ. ನನ್ನ ಖರೀದಿಯ ದಿನ ಹೋದವು'

ಕಿಂಚಿತ್ ಲಜ್ಜಿತನಾದರೂ ನಾನು ಹೇಳಿದೆ:— "ನಿಮಗೆ ತಪ್ಪು ತಿಳವಳಿಕೆಯಾಗಿದೆ. ನಾನೇನೂ ಕೊಳ್ಳಲು ಮಾರಲು ಬಂದಿಲ್ಲ ಈ ಕಡೆ ಕೆಲಸವಿತ್ತು ಬಂದಿದ್ದೆ. ಹೋಗುತ್ತ ನಿಮ್ಮನ್ನೂ ಕಂಡು ಹೋಗಬೇಕೆನಿಸಿತು. ಎಷ್ಟಾದರೂ ನೀವು ನನ್ನ ಹಳೆಯ ಗ್ರಾಹಕರು" ನನ್ನ ಮಾತು ಕೇಳಿ ಅವರ ಮುಖದ ಮೇಲೆ ಪ್ರಸನ್ನತೆ ಲಾಸ್ಯವಾಡಿತು. ಹೆಮ್ಮೆಯಿಂದ ಅವರು ತಮ್ಮ ಪತ್ನಿಯ ಕಡೆ ತಿರುಗಿ ಹೇಳಿದರು:—'ಕೇಳಿದೆಯಾ ಇವರ ಮಾತನ್ನು ನಂತರ ತಮ್ಮ ಮಿಲಟರಿಯ ಕರ್ಕಶ ಸ್ವರವನ್ನು ಮೃದು ಮಾಡುತ್ತ ಹೇಳಿದರು. 'ತಮ್ಮ ಕೃಪೆ........ ಆದರೆ ನನ್ನಂಥ ತಲೆ ಬೆಳ್ಳಗಾದ ಒಬ್ಬ ಅರೆ-ಹುಚ್ಚನನ್ನು ಪ್ರೀತಿಯಿಂದ ಕಾಣಲು ಬಂದ ನೀವು ಹಾಗೇ ಮರಳಿದರೆ ನನಗೂ ದುಃಖವಾಗುತ್ತದೆ........! ಹಾಂ! ನನ್ನಲ್ಲಿ ಕೆಲವು ಅಪೂರ್ವ ಚಿತ್ರಗಳಿವೆ. ಅವನ್ನು ಕಂಡು ನಿಮಗೆ ಸಂತೋಷವಾಗದಿರದು. ಅವು ಬರ್ಲಿನ್‌ದಲ್ಲಾಗಲಿ, ವಿಯನಾದಲ್ಲಾಗಲಿ ನೋಡಸಿಗುವದಿಲ್ಲ. ಪ್ರೇಮದಿಂದ, ಆಸ್ಥೆಯಿಂದ, ಐವತ್ತುವರ್ಷಗಳಿಂದ ಕೂಡಿಸಿದ ಚಿತ್ರಗಳು ಅವು; ಅಲ್ಲಿ ಇಲ್ಲಿ ಕಾಣಸಿಗುವ ವಸ್ತುಗಳಲ್ಲ. ನೀವೂ ರಸಿಕರು; ಅವನ್ನು ಖಂಡಿತ ಮೆಚ್ಚುವಿರಿ. ........ ಲಿಜಬೆತ್, ಎಲ್ಲಿ ನನ್ನ ಅಲ್ಮಾರಿಯ ಕೈಯನ್ನಾದರೂ ಕೊಡು.'

ನಗುತ್ತ ಕುಳಿತಿದ್ದ ಅವರ ಹೆಂಡತಿ ಈ ಮಾತು ಕೇಳಿ ಬೆಚ್ಚಿ ಬಿದ್ದರು. ತೀರ ಅಸಹಾಯಕತೆಯಿಂದ ನನ್ನ ಕಡೆ ನೋಡಿ ಏನೋ ಸನ್ನೆ ಮಾಡಿದರು. ನನಗೆ ಅವರ ಇಂಗಿತ ತಿಳಿಯಲಿಲ್ಲ. ಎದ್ದು ಗಂಡನ ಹೆಗಲ ಮೇಲೆ ಕೈಯಿಟ್ಟು ಹೇಳಿದರು. "ಫ್ರೆಂಜ್.... ಬಂದವರಿಗೆ ಬೇರೆ ಏನಾದರೂ ಕೆಲಸವಿದೆಯೆ-ಎಂದು ಕೂಡ ಕೇಳಲಿಲ್ಲ; ಒಮ್ಮೆಲೇ ಚಿತ್ರ ತೋರಿಸಲು ಹೊರಟೆ. ಮೇಲಾಗಿ ಇದು ಊಟದ ಸಮಯ" (ನನ್ನ ಕಡೆ ತಿರುಗಿ) "ಸಾಯಂಕಾಲ ನೀವು ನಮ್ಮೊಡನೆ ಕಾಫಿ ಕುಡಿಯಲು ಬಂದರೆ ಆಗಲೇ ಚಿತ್ರಗಳೆಲ್ಲವನ್ನೂ ತೋರಿಸಬಹುದು. ನನ್ನ ಮಗಳು—ಅನ್ನಾ ಮರಿಯಾಳ ಪರಿಚಯವೂ ನಿಮಗಾದಂತಾಗುತ್ತದೆ. ಅವಳಿಗೆ ಆ ಚಿತ್ರಗಳ ಬಗ್ಗೆ ವಿಶೇಷ ಜ್ಞಾನವಿದೆ."

ಮಾತು ಮುಗಿಸಿ ಅವರು ನನ್ನ ಕಡೆ ನೋಡಿದರು. ಅವರ ದೃಷ್ಟಿಯಲ್ಲಿ ದೈನ್ಯತೆ ಇತ್ತು. ಆ ನೋಟ ಇೀಗ ಆ ಸಂಗ್ರಹ ನೋಡುವುದು ಬೇಡ ಎಂದು ಸ್ಪಷ್ಟವಾಗಿ ಹೇಳುತ್ತಿತ್ತು. ಆ ಸೂಚನೆಯನ್ನರಿತು ಅನಿವಾರ್ಯವಾಗಿ ' ಇೀಗ ನನಗೂ ಊಟಕ್ಕೆ ಹೋತ್ತಾಗುತ್ತದೆ; ಮಧ್ಯಾಹ್ನ ಮೂರರ ಸುಮಾರಕ್ಕೆ ಬರುವೆ" ಎಂದು ಹೇಳಿದೆ. ನನ್ನ ರೈಲು ಆರಕ್ಕಿತ್ತು.

ಆಡುವ ಹುಡುಗನಿಂದ ಆಟಿಕೆಯನ್ನು ಕಿತ್ತುಕೊಂಡರೆ ಆಗುವ ನೋವು ಆಗಿರಬೇಕು ಅವರಿಗೆ. ನೊಂದ ದನಿಯಲ್ಲಿ ಹೇಳಿದರು: " ಹೂಂ! ........ ಆಗಲಿ! ನೀವು ಪಟ್ಟಣದವರು. ನಿಮಗೆ ಎಷ್ಟೋ ಕೆಲಸಗಳಿರುತ್ತವೆ. ಆದರೂ ನೀವು ನನ್ನ ಸಂಗ್ರಹ ನೋಡಲೇಬೇಕು. ಒಂದೆರಡು ಚಿತ್ರಗಳನ್ನು ನೋಡಲು ನಾನು ಹೇಳುತ್ತಿಲ್ಲ. ಪೂರ್ಣ ೨೭ ಪೋರ್ಟಫೋಲಿಯೋಗಳ ಚಿತ್ರ ಸಂಗ್ರಹವನ್ನು ನೋಡಲು ಆಗ್ರಹ ಮಾಡುತ್ತಿದ್ದೇನೆ. ಪ್ರತಿಯೊಂದರಲ್ಲಿ ಪ್ರಸಿದ್ಧ ಕಲಾವಿದರ ಚಿತ್ರಗಳಿವೆ. ಸರಿಯಾಗಿ ಮೂರಕ್ಕಾದರೂ ಬಂದರೆ ಎಲ್ಲವನ್ನೂ ನೋಡಬಹುದು.

ಅವರ ಹೆಂಡತಿ ನನ್ನನ್ನು ಬೀಳ್ಕೊಡಲು ಬಾಗಿಲ ವರೆಗೂ ಬಂದರು. ಬಾಗಿಲ ತೆರೆಯುವದಕ್ಕಿಂತ ಮುಂಚೆ ಅವರು ಮೆಲ್ಲನೆ ಹೇಳಿದರು. ನೀವು ಮತ್ತೆ ಇಲ್ಲಿಗೆ ಬರುವದಕ್ಕಿಂತ ಮೊದಲು ನನ್ನ ಮಗಳು ನಿಮ್ಮನ್ನು ಹೊಟೆಲಿನಲ್ಲಿಯೇ ಕಂಡರೆ ಅಡ್ಡಿ ಇಲ್ಲವಷ್ಟೆ. ಅದು ಅತ್ಯಗತ್ಯ; ಅದರ ಕಾರಣ, ನಾನು ಇೀಗಲೇ ಹೇಳಲಾರೆ."

' ಅವಶ್ಯವಾಗಿ! ನನ್ನೊಡನೆ ಯಾರೂ ಇಲ್ಲ. ಯಾವ ಸಂಕೋಚವೂ ಇಲ್ಲದೆ ಅವರು ಅಲ್ಲಿಗೆ ಬರಬಹುದು' ಎಂದೆ.

ಹೊಟೆಲ್ಲಿಗೆ ಮರಳಿ, ನಾನೂ ಊಟ ಮಾಡಿ ಆದೇ ಕುಳಿತಿದ್ದೆ. ಆನ್ನಾ ಬಂದು ಬಿಟ್ಟಳು. ಬೆಳೆದ ವಯಸ್ಸು, ಸಾಧಾರಣ ಉಡುಪು-ಅವಿವಾಹಿತ ಹುಡುಗಿ! ಬಹಳ ಹೊತ್ತಿನ ವರೆಗೆ ಅವಳು ಸಂಶಯದಿಂದ ನನ್ನನ್ನೇ ನೋಡುತ್ತಿದ್ದಳು. ಅವಳ ಸಂಶಯವನ್ನು ಕಡಿಮೆ ಮಾಡಲು ನಾನು ತುಂಬಾ ಯತ್ನಿಸಿದೆ. ' ಮೂರು ಹೊಡೆಯದಿದ್ದರೇನಾಯಿತು ನೀವು ಇಚ್ಛಿಸಿದರೆ ಇೀಗಲೇ ನಿಮ್ಮ ಜೊತೆ ಬರಲು ಕೂಡ ಸಿದ್ಧನಿದ್ದೇನೆಂ'ದು ಹೇಳಿದೆ. ಇದನ್ನು

ಕೇಳಿ ಅವಳ ಮುಖ ಬಿಳುಪೇರಿತು. ಅಂಜುತ್ತ—ಅಂಜುತ್ತ “ಕೆಲವು ಮಾತನಾಡಬೇಕಾಗಿದೆ ನಿಮ್ಮೊಡನೆ” ಎಂದಳು.

“ಹಾಗಾದರೆ ಸಂಕೋಚವಿಲ್ಲದೆ ಹೇಳಿ; ಇಷ್ಟೇಕೆ ಹಿಂದು ಮುಂದು ನೋಡುವದು!” ಎಂದೆ ನಾನು.

ಹೇಗೆ ಮೊದಲು ಮಾಡಬೇಕೆಂಬುದೇ ಅವಳಿಗೆ ತಿಳಿಯಲಿಲ್ಲವೇನೋ! ತುಟಿ ಕೈ ಎರಡು ಅಲುಗಾಡುತ್ತಿದ್ದವು. ಹೇಗೋ ಆರಂಭಿಸಿದಳು; ‘ಅಮ್ಮ ಕಳಿಸಿದ್ದಾಳೆ ನನ್ನನ್ನು...........; ನಿಮ್ಮಿಂದ ನಮಗೆ ತುಂಬ ಸಹಾಯವಾಗ ಬೇಕಾಗಿದೆ;........ಮನೆಗೆ ಹೋದ ಕೂಡಲೇ ನಮ್ಮ ತಂದೆಯುವರು ನಿಮಗೆ ಸಂಗ್ರಹ ತೋರಿಸಲಿರುವರಷ್ಟೇ!........ಆದರೆ ಆ ಅಮೂಲ್ಯ ಸಂಗ್ರಹ........ ದಲ್ಲಿಯು....ಬಹಳ ಕಡಿಮೆ ಭಾಗ....ಮಾತ್ರ....ಈಗ ಉಳಿದಿದೆ’........ಮಾತ ನಾಡುತಾಡುತ್ತ ಅವಳು ಒಂದು ದೀರ್ಘವಾದ ಉಸಿರೆಳೆದಳು. ಅಳುವ ಳೇನೋ ಎನ್ನಿಸಿತು. ಮತ್ತೆ ಶಕ್ತಿಯನ್ನೆಲ್ಲಾ ಒಟ್ಟುಗೂಡಿಸಿ ಹೇಳಿದಳು; “ಎಲ್ಲವನ್ನೂ ಹೇಳುವೆ........ಯಾವುದೂ ಮುಚ್ಚಿಡುವುದಿಲ್ಲ;........ಸ್ವಲ್ಪ ಸಹಾನುಭೂತಿಯಿಂದ ಕೇಳಿಕೊಳ್ಳಿರಿ. ನಿಮಗೆ ಗೊತ್ತಿಲ್ಲ—ನಾವು ಬಹಳ ಬಡತನದ ಪರಿಸ್ಥಿತಿಯಲ್ಲಿ ದಿನಗಳೆಯ ತೊಡಗಿದ್ದೇವೆ........ಯುದ್ಧ ಪ್ರಾರಂಭ ವಾದ ಕೆಲವು ದಿನಗಳಲ್ಲಿಯೇ ತಂದೆಯುವರ ಕಣ್ಣು ಹೋಗಿಬಿಟ್ಟವು. ಆರಂಭ ದಲ್ಲಿ ದೃಷ್ಟಿ ಮಂದವಾಯಿತು; ಕೆಲವು ದಿನಗಳ ನಂತರ ಅದೂ ಇಲ್ಲದಾಯಿತು. ಯುದ್ಧದಲ್ಲಿ ಸೇರುವ ಇಚ್ಛೆ ಅವರಿಗೆ ಬಲವಾಗಿತ್ತು. ಆದರೆ ಆಗ ಎಪ್ಪತ್ತು ವರ್ಷದ ಮುದುಕರು. ಅವರಿಗೆ ಎಲ್ಲಿಯೂ ಸ್ಥಳ ಸಿಕ್ಕಲಿಲ್ಲ. ನಮ್ಮ ಸೈನ್ಯದ ಮುನ್ನಡೆ ನಿಂತದ್ದು ಓದಿದಾಗ ಅವರಿಗೆ ಬಹಳ ತಳಮಳವಾಯಿತು. ಆಗ ಕೆಲವು ದಿನ ಹಾಸಿಗೆ ಹಿಡಿದರು. ಇದೇ ಕಾರಣದಿಂದಲೇ ಕಣ್ಣಿನ ಬೆಳಕು ಹೊರಟು ಹೋಯಿತೆಂದು ಡಾಕ್ಟರರ ಅಭಿಪ್ರಾಯ! ಅಂತೂ ಅವರು ಕುರುಡ ರಾದರು. ಕಣ್ಣಿದ್ದಾಗ ನಸುಕಿನಲ್ಲಿ ದೂರ ದೂರದವರೆಗೆ ತಿರುಗಾಡಲು ಹೋಗುತ್ತಿದ್ದರು. ಇಚ್ಛೆಯಾದಾಗ ಬೇಟೆಗೂ ಹೋಗಿ ಬರುತ್ತಿದ್ದರು. ಆದರೆ ಅವರ ಕಣ್ಣಿನ ಬೆಳಕಿನೊಡನೆ ದಿನಗಳೆಯುವ ಎಲ್ಲ ಆಸರೆಗಳೂ ಹೋಗಿ ಬಿಟ್ಟವು! ಹೊರಗೆಲ್ಲಿಯೂ ಹೋಗುವಂತಿಲ್ಲ. ಉಳಿದ ಒಂದೇ ಆಸರೆ ಎಂದರೆ ಚಿತ್ರ ಸಂಗ್ರಹ. ದಿನಾಲು ಅದನ್ನೇ ನೋಡುತ್ತಾರೆ—.”

"ನೋಡುತ್ತಾರೆಯೇ ? " ನಾನು ಆಶ್ಚರ್ಯದಿಂದ ಕೇಳಿದೆ.

'ಹೂಂ! ದಿನಾಲು ಮಧ್ಯಾಹ್ನ ಮೇಜಿನ ಮೇಲೆ ಕುಳಿತು ಒಂದೊಂದಾಗಿ ಎಲ್ಲವನ್ನೂ ನಿರೀಕ್ಷಿಸುತ್ತಾರೆ. ಎಷ್ಟೋ ವರ್ಷಗಳ ನಿರೀಕ್ಷಣೆಯಿಂದ ಅವುಗಳ ಕ್ರಮ ಚನ್ನಾಗಿ ನೆನಪಿದೆ ಅವರಿಗೆ.........ಚಿತ್ರಗಳ ಬೆಲೆ ಏರಿದ್ದು ಕೇಳಿದಾಗ ಅವರಿಗಾಗುವ ಆನಂದ ಅಷ್ಟಿಷ್ಟಲ್ಲ. ಚಿತ್ರಗಳಿಗೆ ಸಂಬಂಧಿಸಿದ ಮಾತುಗಳೆಲ್ಲ ಅವರ ಮನರಂಜನೆಯ ಸಾಧನವಾಗುತ್ತವೆ. ಆದರೆ ಇದೇ ಅವರ ಪಾಲಿಗೆ ಕುತ್ತಾಗಿದೆ. ಚಿತ್ರಗಳಂತೆಯೇ ಎಲ್ಲ ವಸ್ತುಗಳ ಬೆಲೆ ಏರಿದ್ದು ಅವರಿಗೆ ಗೊತ್ತೇ ಇಲ್ಲ. ಅವರು ಎಷ್ಟೂ ದುಡ್ಡು ಕೂಡಿಟ್ಟರಲಿಲ್ಲ. ಬರುತ್ತಿರುವ ಪೆನಶೆನ್‌ದ ಹಣದಿಂದ ಈ ಕಾಲದಲ್ಲಿ ಒಪ್ಪೊತ್ತಿನ ಊಟ ಕೂಡ ಕೊಳ್ಳುವದು ಅಸಾಧ್ಯ. ಜೊತೆಗೆ ನಮ್ಮ ಅಕ್ಕನ ಪಾಲನೆ ಪೋಷಣೆಯ ಭಾರ ನಮ್ಮ ಮೇಲೆಯೇ ಬಿತ್ತು. ಜೊತೆಗೆ ನಾಲ್ಕು ಮಕ್ಕಳು. ಅವಳ ಗಂಡ ಯುದ್ಧದಲ್ಲಿ ಮಡಿದ ತಂದೆಯುವರಿಗೆ ಇದಾವುದನ್ನೂ ಹೇಳುತ್ತಿರಲಿಲ್ಲ. ಇದೆಲ್ಲದರ ಗೊಂದಲದಿಂದ ಅವರ ಶಾಂತಿಗೆ ಧಕ್ಕೆ ತರಬಾರದೆಂದು ನಾವು ನಿರ್ಧರಿಸಿದ್ದೆವು. ಎಲ್ಲ ರೀತಿಯಿಂದ ಖರ್ಚು ಕಡಿಮೆ ಮಾಡಿದರೂ ನಿರ್ವಾಹ ತೀರಾ ಕಠಿಣವಾಗ ತೊಡಗಿತು. ನನ್ನ ಇದ್ದ ಒಂದೆರಡು ಆಭರಣಗಳು ಹೋದವು. ಮನೆಗೆ ಅವಶ್ಯಕವಾದ ವಸ್ತುಗಳನ್ನಷ್ಟೇ ಇಟ್ಟುಕೊಂಡು ಉಳಿದದ್ದೆಲ್ಲಾ ಮಾರಿದೆವು. ಮಾರುವ ಸಾಮಾನು ಬಹಳಿರಲಿಲ್ಲ. ಎಲ್ಲ ಹಣವನ್ನೂ ತಂದೆಯವರು ಚಿತ್ರಗಳಿಗೇ ಹಾಕಿದ್ದರು. ಆದರೂ ಸಾಲಲಿಲ್ಲ. ಅದು ವರೆಗೆ ತಂದೆಯುವರ ಚಿತ್ರಗಳಿಗೆ ಕೈ ಹಚ್ಚಿರಲಿಲ್ಲ. ಕೊನೆಗೆ ಅನಿವಾರ್ಯವಾಗಿ ಮಾರುವ ಹೊತ್ತು ಬಂತು. ಚಿತ್ರ ಮಾರಬೇಕು—; ಇಲ್ಲವೆ ತಂದೆಯುವರನ್ನೂ ಉಪವಾಸ ಹಾಕಬೇಕು. ಎರಡೇ ಹಾದಿ! ಆ ದುರ್ಧರ ಪ್ರಸಂಗದಲ್ಲಿ ಅವನ್ನು ಮಾರುವುದೇ ಎಂದು ನಿರ್ಧರಿಸಿದೆವು. ಅದಕ್ಕೆ ಅವರ ಅಪ್ಪಣೆ ಕೇಳಲಿಲ್ಲ. ಕೇಳಿದ್ದರೆ ಅವರೆಂದೂ ಒಪ್ಪುತ್ತಿರಲಿಲ್ಲ. ಜರ್ಮನಿ ಸೋಲ ತೊಡಗಿತ್ತು. ಅನ್ನಕ್ಕಾಗಿ ಜನ ಬಳಲುತ್ತಿರುವದೇನು ಗೊತ್ತು ಅವರಿಗೆ ? "

'ನಾವು ಮಾರಿದ ಮೊದಲನೆಯ ಚಿತ್ರ ರೈಂಬ್ರೆಂಡನದು. ಅದರಿಂದ ಎಷ್ಟೋ ಸಾವಿರ ಮಾರ್ಕು ಕೈಗೆ ಹತ್ತಿದವು. ಒಂದು ಒಂದೂವರೆ ವರ್ಷದ ವರೆಗೆ ಚಿಂತೆಯಿಲ್ಲ ಎಂದೆವು. ಆದರೆ ಬಂದ ಹಣ ಎರಡು ತಿಂಗಳಲ್ಲಿಯೇ

ಕರಗಿಹೋಯಿತು. ಇನ್ನೊಂದು ಮಾರಿದೆವು. ಅಲ್ಲಿಂದ ಮತ್ತೊಂದು. ನಮ್ಮ ಅಸಹಾಯತೆ ಕಂಡು ಅಂಗಡಿಯವನು ಪ್ರತಿಸಲ ಬೆಲೆ ಇಳಿಸುತ್ತಿದ್ದ. ಬೆಲೆ ಇಳಿಸುವದಲ್ಲದೆ ಅವನು ಒಟ್ಟು ರಕಮು ಒಮ್ಮೆಯೂ ಕೊಡಲಿಲ್ಲ. ಆಗಷ್ಟು ಈಗಷ್ಟು ಕೊಡುತ್ತಿದ್ದ. ಹಣ ಹೇಗೋ ಹೋಗಿ ಬಿಡುತ್ತಿದ್ದಿತು. ಲಕ್ಷಾನುಗಟ್ಟಲೆ ಸಿಕ್ಕಬೇಕಾದ ಚಿತ್ರಗಳು ಸಾವಿರಗಳಲ್ಲಿ ಹೋಗಿ ಬಿಟ್ಟವು. ಹೀಗಾಗಿ ಎಲ್ಲ ಚಿತ್ರಗಳೂ ಹೊಟ್ಟೆ ತುಂಬುವದರಲ್ಲೇ ಕರಗಿದುವು.'

'ಅದಕ್ಕಾಗಿಯೇ ಈ ದಿನ ನೀವು ಬಂದಾಗ ಅಮ್ಮ ಹೆದರಿದಳು. ಆಗಲೇ 'ಪೋರ್ಟಫೋಲಿಯೋ' ತೆರೆದಿದ್ದರೆ ನಮ್ಮೆಲ್ಲರ ಗುಟ್ಟೆಲ್ಲವೂ ರಟ್ಟಾಗುತ್ತಿತ್ತು. ತಂದೆಯವರು ಪ್ರತಿಯೊಂದು ಚಿತ್ರವನ್ನು ಸ್ಪರ್ಶದಿಂದಲೇ ತಿಳಿಯುತ್ತಾರೆ. ಅಂತೆಯೇ ಪ್ರತಿ ಚಿತ್ರ ಮಾರಿದಾಗ ಅದರ ಸ್ಥಳದಲ್ಲಿ ಅದೇ ಅದೇ ಅಳತೆಯ ಮತ್ತೊಂದು ಪುಟವನ್ನಿಡುತ್ತಿದ್ದೆವು. ಇದರಿಂದ ಅವರಿಗೇನೂ ಸಂದೇಹ ಬರಲಿಲ್ಲ. ಎಂದೋ ಕಣ್ಣಿದ್ದಾಗ ನೋಡಿ ಅನುಭವಿಸಿದ ಆನಂದವನ್ನೇ ಈಗಲೂ ಅನುಭವಿಸುತ್ತಾರೆ. ಅವರು ಇಲ್ಲಿ ಯಾರಿಗೂ ಚಿತ್ರ ತೋರಿಸುವದಿಲ್ಲ. ಈ ಊರಲ್ಲಿ ಕಲಾಪ್ರೇಮಿಗಳೇ ಇಲ್ಲ. ಆದರೆ ತಮ್ಮ ಸಂಗ್ರಹ ಈ ರೀತಿ ಹರಿದು ಹಂಚಿ ಹೋಗಿದೆ ಎಂದು ತಿಳಿದರೆ ಅವರ ಎದೆಯೇ ಒಡೆಯುವದು.''

'ನನ್ನದಿಷ್ಟೇ ಬೇಡಿಕೆ ನೀವು ದಯವಿಟ್ಟು ಅವರ ಭ್ರಮೆಯನ್ನು ಹಾಳು ಮಾಡದಿರಿ'' ಆ ಮಾತು ಹೇಳುತ್ತಿದ್ದಂತೆ ಆವಳ ಸ್ವರ ಕಂಪಿಸಿತು. 'ಅವರ ಆನಂದಭಂಗ ಮಾಡಬೇಡಿರಿ. ಅವರ ನಂಬಿಗೆಯ ಬೇರನ್ನು ಕೀಳಬೇಡಿರಿ. ನಮ್ಮನೇ ತಪ್ಪು ನಿಜ; ನಾವಿಲ್ಲೆನ್ನುವುದಿಲ್ಲ. ಆದರೆ ಅವರನ್ನೂ ಕುಟುಂಬವನ್ನೂ ಜೀವಂತವಾಗಿರಿಸಲು ಅದರ ಹೊರತಾಗಿ ಮಾರ್ಗವೇ ಇರಲಿಲ್ಲ. ಜೊತೆಗೆ ಅಕ್ಕನ ಅನಾಥ ಕೂಸುಗಳು ಬೇರೆ! ಈ ಕಷ್ಟದ ಕಾಲದಲ್ಲಿ ಅವರ ಕೊನೆಯ ದಿನಗಳಲ್ಲಿ ತಂದೆಯವರಿಗೆ ಆ ಚಿತ್ರಗಳು ಗಂಟೆಗಂಟೆಗಳ ಪುನರಂಜನೆಯ ಸಾಧನೆ. ಪ್ರತಿಯೊಂದು ಚಿತ್ರದ ಜೊತೆ ಅವರು ಅತ್ಯಂತ ಆತ್ಮೀಯತೆಯಿಂದ ಮಾತನಾಡುತ್ತಾರೆ. ಕಣ್ಣಿನ ಬೆಳಕು ಹೋದ ಮೇಲೆ ಇಂದೇ ಅವರ ಸಂತೋಷದ ದಿನ. ಕಲಾಪ್ರೇಮಿಗಳಿಗೆ ಚಿತ್ರ ತೋರಿಸುವ ವ್ಯಾಕುಲತೆ ಅವರಲ್ಲಿ ತುಂಬಿಕೊಂಡಿತ್ತು. ಆ ಸ್ವರ್ಣದಿನವನ್ನು

ಅವರು ಕುತೂಹಲದಿಂದ ಕಾಯುತ್ತಿದ್ದರು. ಇದು ವರೆಗೂ ಕೂಡಿ ಬಂದಿರ ಲಿಲ್ಲ. ಇಂದು ನೀವು ಬಂದುದರಿಂದ ಆ ದಿನ ಬಂದಿದೆ. ನೀವು ಅವರ ಭ್ರಮೆಯನ್ನು ಮಾತ್ರ ಹಾಗೇ ಇರಗೊಟ್ಟರೆ........

ಆ ಅರೆಯಾಗುಳಿದ ವಾಕ್ಯದಲ್ಲಿ ಅಡಗಿದ ಮಾನಸಿಕ ಸಂವೇದನೆ ಅಷ್ಟಿಷ್ಟಲ್ಲ. ನನ್ನ ಜೀವನದಲ್ಲಿ ಎಷ್ಟೋ ಹೃದಯದ್ರಾವಕ ಸ್ಥಿತಿಗಳನ್ನು ಕಂಡಿದ್ದೇನೆ. ಸರ್ವಶ್ರೇಷ್ಠಕಲಾಕಾರರು ತಮ್ಮ ಸರ್ವೋತ್ತಮ ಚಿತ್ರಗ ಳನ್ನು ಒಂದು ರೊಟ್ಟಿಯ ತುಣುಕಿಗಾಗಿ ಮಾರಿಕೊಂಡದ್ದನ್ನೂ ನೋಡಿ ದ್ದೇನೆ. ಆದರೆ ಈಗಣ ಸ್ಥಿತಿ ಕನಿಕರತೆಯಲ್ಲಿ ಅದಕ್ಕೂ ಕ್ರೂರಾಗಿತ್ತು; ಅದು ನನ್ನ ಮನಸ್ಸನ್ನೆ ಮುದ್ದೆ ಮಾಡಿತು. ಅವಳ ಮಾತಿಗೆ ಒಪ್ಪದೆ ಗತಿಯೇ ಇರಲಿಲ್ಲ; ಆ ಕೃತ್ರಿಮತೆಯ ನಟನೆಯಲ್ಲೇ ಒಂದು ಮಹೋಪ ಕಾರದ ಅಂಶಸಡಗಿತ್ತು ನನ್ನ ಕಲಾಭಿರುಚಿ ಆ ಪ್ರಾಸಂಗಿಕ-ಒತ್ತಾಯ ದೆದುರು ಕುಂಟುಬಿತ್ತು.

ಕೂಡಿಯೇ ಮನೆಗೆ ಹೋದೆವು. ಹಾದಿಯಲ್ಲಿ ಅವಳು ಚಿತ್ರಗಳಿಗೆ ಬಂದ ಬೆಲೆ ಹೇಳಿದಳು. ಚಿನ್ನ ಹಿತ್ತಾಳೆಯಾಗಿಬಿಟ್ಟಿತ್ತು. ನನ್ನಿಂದಲೂ ಏನಾದರೂ ಸಹಾಯವಾಗುವಂತಿದ್ದರೆ ಮಾಡುವದಾಗಿ ಆಶ್ವಾಸನಕೊಟ್ಟೆ. ಮೆಟ್ಟಲು ಏರುತ್ತಿದ್ದಂತೆಯೇ ಅವರ ಸ್ವಾಗತ ಕೇಳಿಸಿತು."

"ಬನ್ನಿ—ಒಳಗೆ ಬನ್ನಿ" ಅವರ ಸ್ವರದಲ್ಲಿ ಉಲ್ಲಸತೆ ಇತ್ತು. ಆನಂದ ವಿತ್ತು. ಚೈತನ್ಯವಿತ್ತು

ವೃದ್ಧೆ ಬಾಗಿಲು ತೆರೆಯುತ್ತ ಹೇಳಿದರು: 'ಫ್ರೆಂಜ್ ಯಾವಾಗಲೂ ಮಧ್ಯಾಹ್ನ ಮಲಗುತ್ತಾನೆ. ಆದರೆ ಇಂದು ನೀವು ಬರುವ ಆನಂದದಲ್ಲಿ ಹಾಸಿಗೆಗೆ ಬೆನ್ನುಹಚ್ಚಿಲ್ಲ. ನಿಮ್ಮ ಹಾದಿಯನ್ನೇ ನೋಡುತ್ತಿದ್ದ. ಮಾತ ನಾಡುತಾಡುತ್ತ ಅವರು ತಮ್ಮ ಮಗಳಕಡೆ ನೋಡಿದರು.—'ಎಲ್ಲವೂ ಸರಿ ಯಷ್ಟೇ ಎಂದು ಕೇಳುವಂತಿತ್ತು ಆ ನೋಟ. ಒಳಗೆ ಪ್ರವೇಶಿಸಿದೊಡನೆ ಒಂದು ತರದ ಆತ್ಮೀಯತೆಯಿಂದ ಅವರು ನನ್ನನ್ನು ಎಳೆದು ಕುರ್ಚಿಯ ಮೇಲೆ ಕೂಡಿಸಿಕೊಂಡರು.

ಮೇಜಿನ ಮೇಲೆ ಇಟ್ಟಿದ್ದ ಪೋರ್ಟ್ ಫೋಲಿಯೋ ಒಂದನ್ನು ಎತ್ತುತ್ತ ಹೇಳಿದರು; "ಸುಮ್ಮನೆ ಹೊತ್ತುಕಳೆಯುವದು ಬೇಡ;—ನಿಮಗೆ

ಸಮಯವಿಲ್ಲ. ಇಕ್ಕೊಳ್ಳಿ, ಈ ಮೊದಲನೆಯದರಲ್ಲಿ 'ಡೂರರ್'ರ ಚಿತ್ರವಿದೆ. ಅದಾದನಂತರ ಮತ್ತೊಂದು– ಇದು 'ಡೋನಾ ವಾಲ್ಕ್'ರ ಚಿತ್ರ; ಇಕ್ಕೊಳ್ಳಿ ಇದು ಇನ್ನೊಂದು. ಒಂದಕ್ಕಿಂತ ಒಂದು ಚೆನ್ನಾಗಿವೆ. ಅಲ್ಲವೇ! ಕಲೆಯ ವೈಶಿಷ್ಟ್ಯದ ಪೂರ್ಣ ಪ್ರತೀಕಗಳಿವು!.... ನೀವೇ ನೋಡಿ ನಿರ್ಣಯಿಸಿ ಇವುಗಳ ಯೋಗ್ಯತೆಯನ್ನು........!'

ಮತ್ತೊಂದು ಪೋರ್ಟ್‌ಫೋಲಿಯೋ ತೆರೆಯುತ್ತ ಅವರು ಹೇಳಿದರು.–

'ನಾನು 'ಎಪೊಕೆಲಿಪ್ಸ್'ದಿಂದ ಮೊದಲು ಮಾಡುತ್ತೇನೆ—'

ಅವರು ಪ್ರೇಮದಿಂದ, ಆದರದಿಂದ ಮೃದುವಾಗಿ ಮೊದಲನೆ ಬಿಳಿ ಕಾಗದ ಎತ್ತಿ ಹಿಡಿದರು—ನನ್ನ ಕಾಣುವ ಹಾಗು ತಮ್ಮ ಕಾಣದ ಕಣ್ಣುಗಳೆದುರು!! ಅವರ ಕಣ್ಣುಗಳಲ್ಲಿ ಆನಂದ ತೇಲುತ್ತಿತ್ತು. ಉತ್ಸಾಹ ತುಳುಕುತ್ತಿತ್ತು. • ಅವನ್ನು ನೋಡಿದಾಗ ಅವರು ಕುರುಡರೆಂಬ ಭಾವವೇ ಬಯಲಾಗುತ್ತಿತ್ತು. ಮುಪ್ಪಿನಿಂದ ಮುದುಡಿದ ಅವರ ಮುಖದ ಮೇಲೆ ಆ ಚಿತ್ರವನ್ನು ಗುರುತಿಸಿದ ಭಾವ ಸ್ಪಷ್ಟವಾಗಿ ಮೂಡತೊಡಗಿತ್ತು.

'ನೀವೆಂದಾದರೂ ಇಂತಹ ಚಿತ್ರ ಕಂಡಿದ್ದೀರಾ! ಎಂತಹ ನಯ! ಎಷ್ಟು ನಾಜೋಕು! ಕನ್ನಡಿಯ ಹೊಳಪು ಬಣ್ಣದಲ್ಲೇ ಮೆರೆಗು ಪಡೆದಿದೆ!! ಡ್ರೆಸ್‌ಡನ್‌ದಲ್ಲಿ ಇದರದೇ ಒಂದು ಪ್ರತಿಯನ್ನು ನೋಡಿದ್ದೆ. ಇದರ ಎದುರು ಅದೇನೂ ಅಲ್ಲ ಬಿಡಿ.'

ಅವರು ಚಿತ್ರ ತಿರುವಿ ಆ ಚಿತ್ರದ ಸಂಬಂಧವಾಗಿ ಹಿಂದೆ ಬರೆದುದನ್ನು ನಾನು ಓದಬೇಕೆಂದು ಅವರ ಇಚ್ಛೆ ಇದ್ದಿತು. ನಾನು ಬರವಣಿಗೆಯನ್ನು ಓದಲು ಬಗ್ಗಿದೆ—

'"ನೆಗಲರ್ ಸಂಗ್ರಹದ ಮುದ್ರೆ ನೋಡುತ್ತಿದ್ದಿರಾ? ಇದು ನೋಡಿ! ರೆಮಿ ಮತ್ತು ಎಸ್‌ಡಲ್! ತಮ್ಮ ಪ್ರಖ್ಯಾತ ಕೃತಿಗಳು, ನನ್ನಂಥವನ ಕೋಣೆಯಲ್ಲಿರಬಹುದೆಂದು ಅವರು ಕಲ್ಪಿಸಿರಲಿಕ್ಕಿಲ್ಲ ಕೂಡ"

ಒಂದು ಬರೀ ಬಿಳಿ ಕಾಗದದ ಬಗೆಗೆ ಅವರಲ್ಲಿದ್ದ ಉಲ್ಲಾಸವನ್ನು ಕಂಡು ನನ್ನ ಎದೆ ಕಂಪಿಸಿತು. ಮುದ್ರೆ ಇರಬಹುದಾದ ಸ್ಥಳದಲ್ಲಿ ಅವರು ತಮ್ಮ ಬೆರಳನ್ನಿಟ್ಟಾಗಲಂತೂ ಗುಡ್ಡದ ಮೇಲಿಂದ ಜಾರಿ ಬಿದ್ದಂತಾಯಿತು

ನನಗೆ. ನಾಲಿಗೆ ಒಣಗಿತು. ತಾಯಿ—ಮಗಳ ಭಯ ಭೀತ ಮುಖ ನೋಡಿ ಮತ್ತೆ ಸಾವರಿಸಿಕೊಂಡೆ. ಇಲ್ಲದ ಉಲ್ಲಾಸ ಎಳೆದುತಂದು ಹೇಳಿದೆ. "ನಿಜವಾಗಿಯೂ! ಇದೊಂದು ಅಪ್ರತಿಮ ಕಲಾಕೃತಿ!"

ಅವರು ಹೆಮ್ಮೆಯಿಂದ ಉಬ್ಬಿದರೂ,

"ಇದೇನು ಮಹಾ! ಇವೆರಡು ಚಿತ್ರಗಳನ್ನಾದರೂ ನೋಡಿರಿ 'ಮೆಲಂಕಲಿ' ಮತ್ತು 'ಫ್ಯಾಶನ್' ಇದನ್ನು ಸರಿಗಟ್ಟುವ ಚಿತ್ರ ಮತ್ತೊಂದು ಯಾವುದೂ ಇಲ್ಲವೇ ಇಲ್ಲ. ಇದರ ಹೊಳಪು ಕಾಣುತ್ತಿರುವುದೇ ನಿಮಗೆ? ಇದನ್ನು ಕಂಡು ಉಳಿದ ಕಲಾವಿದರೂ ಈರ್ಷೆಯಿಂದ ಉರಿದೇಳಬಹುದು."

ಹೆಚ್ಚಿಗೆ ಹೇಳಲಾರೆ. ಸುಮಾರು ಎರಡೂವರೆ ಗಂಟೆಯವರೆಗೆ ಇದೇ ನಡೆಯಿತು. ಒಂದಾದನಂತರ ಒಂದು ಪೋರ್ಟ್‌ಫೋಲಿಯೋ ಬರುತ್ತಿತ್ತು. ಅದರ ಬಿಳೀ ಪುಟಗಳು ತಿರುವಲ್ಪಡುತ್ತಿದ್ದವು. ಸುಮಾರು ಮುನ್ನೂರರಷ್ಟು ಬಿಳಿ ಹಾಳೆಗಳನ್ನು ಸುಮ್ಮನೆ ನೋಡುತ್ತಿರುವುದು ಸಾಕಷ್ಟು ಬೇಸರಿಕೆಯ ಕೆಲಸ ಜೊತೆಗೆ ಅಭಿಪ್ರಾಯ ವಿಮರ್ಶೆಗಳನ್ನೂ ವ್ಯಕ್ತ ಮಾಡಬೇಕಾಗುತ್ತಿತ್ತು. ನಾನು ಹೊಗಳಿದಾಗೊಮ್ಮೆ ಅವರ ನಿಸ್ತೇಜ ಕಣ್ಣುಗಳಲ್ಲಿ ನಂಬಲಸಾಧ್ಯವಾದ ಹೊಳಪು ಕಂಡುಬರುತ್ತಿತ್ತು. ಆ ನಟನೆಯನ್ನು ಕೊನೆಯುವರೆಗೂ ಇರಿಸುವ ದುರ್ಧರ ಪ್ರಸಂಗವನ್ನು ಅಂದು ನಾನು ಹೊತ್ತುಕೊಳ್ಳಬೇಕಾಗಿತ್ತು.

ಒಮ್ಮೆ ಮಾತ್ರ ಅನರ್ಥ ಆಗುತಾಗುತ್ತ ಉಳಿಯಿತು. ಅವರು ನನಗೆ ರೈಂಬ್ರೆಂಡರ 'ಎಂಟಿವೋಪ್' ಚಿತ್ರ ತೋರಿಸತೊಡಗಿದ್ದರು. ಚಿತ್ರದ ಪ್ರಶಂಸೆ ಮಾಡುತ್ತ ಅವರು ತಮ್ಮ ಬೆರಳನ್ನು ಅದರ ಮೇಲೆ ತಿರುವುತ್ತಿದ್ದರು. ಇರಬೇಕಾದ ಸ್ಥಳದಲ್ಲಿ "ಏನೋ ಇದ್ದಂತೆನ್ನಿಸಲಿಲ್ಲ ಅವರಿಗೆ. ಅವರು ಬೆಚ್ಚಿ ಬಿದ್ದರು ಮುಖದ ಬಣ್ಣ ಒಮ್ಮೆಲೆ ಬದಲಾಯಿತು. ತುಟಿನಡುಗಿದವು. ನಡುಗುವ ಸ್ವರದಲ್ಲಿ ಅವರು ಕೇಳಿದರು; "ಇದು ಎಂಟಿವೋಪ್' ತಾನೆ! ಈ 'ವುಡ್‌ಕಟ್' (woodcut)ನ್ನು ನನ್ನ ಹೊರತಾಗಿ ಯಾರೂ ಮುಟ್ಟುವದಿಲ್ಲ. ಹೋಯಿತು ಹೇಗೆ"?

ಅವಸರವಾಗಿ ಅವರ ಕೈಯಿಂದ ಆ ಕಾಗದ ತೆಗೆದುಕೊಂಡೆ ಅವರಿಗೆ ಏನಾದರೂ ಹೇಳಲೇ ಬೇಕಿತ್ತು. ನನ್ನ ಕಲಾತ್ಮಕತೆಯನ್ನೆಲ್ಲಾ ಕುದು

ರಿಸಿ ಅದನ್ನು ಬಣ್ಣಿಸಿ ಹೇಳಿದೆ. ಅವರ ಸಂಶಯು ದೂರಾಯಿತು. ನಾನು ಹೊಗಳಿದಷ್ಟೂ ಅವರು ಹಿಗ್ಗುತ್ತಿದ್ದರು. ಕೊನೆಗೆ ತಮ್ಮ ಹೆಂಡತಿಯತ್ತು ಹೊರಳಿ ಹೇಳಿದರು:—'ಕಲೆಯ ಬೆಲೆ ಇವರಿಗೆ ಗೊತ್ತಿದೆ. ನೀನನ್ನು ತ್ತಿದ್ದೆ— ದುಡ್ಡು ವ್ಯರ್ಥವಾಗಿ ಹಾಳು ಮಾಡುತ್ತಿರುವೆನೆಂದು. ನಿಜ, ಸೆರೆ, ಸಿಗರೇಟ ಥಿಯೆಟರಗಳಿಂದ ಉಳಿಸಿದ ದುಡ್ಡು ಇದರಲ್ಲಿ ಹಾಕಿದೆನೆನ್ನು. ನೀವೇನೆಂದರೂ ಸರಿ—;ಹೆರ್ ರಾಕ-ನರ್ ಇದನ್ನು ಹೋಗಳಿದ್ದಾರೆ. ಅಷ್ಟೆ ಸಾಕು; ನನ್ನ ಮರಣದ ನಂತರ ನೀವು ಇವುಗಳಲ್ಲಿ ಕೆಲವನ್ನೇ ಮಾರಿ ದರೂ ಈ ಊರಿನ ಎಲ್ಲರಿಗಿಂತಲೂ ಶ್ರೀಮಂತರಾಗಬಲ್ಲಿರಿ. ಡ್ರೆಸ್‌ಡನ್‌ದ ಜಮೀನದಾರರ ಸಮಜೋಡಿಯಾಗಿ ನಿಲ್ಲುವಿರಿ ಆಗ ನಿಮಗೆ ನನ್ನ 'ಹುಚ್ಚುತನ' ದ ಮರ್ಮ ಗೊತ್ತಾಗುವದು. ಆದರೆ ನಾನು ಜೀವದಿಂದಿ ರುವವರೆಗೆ ಮಾತ್ರ ಸಂಗ್ರಹವೂ ಜೀವವಿಂದಿರಬೇಕು. ಇಕೊ, ನನ್ನ ನಂತರ ಇವರೇ ಇವುಗಳ ವ್ಯಾಪಾರದಲ್ಲಿ ನಿಮಗೆ ಸಹಾಯ ಮಾಡು ವರು...."

ಹೇಳುತ್ತಿದ್ದಂತೆ ಅವರ ಕೈ ಬೆರಳು ಪೋರ್ಟ್ ಫೋಲಿಯೋ ಮೇಲೆ ಆಡುತ್ತಿದ್ದುವು. ನಿಜವಾಗಿಯೂ ಅದು ಎದೆನಡುಗಿಸುವ, ಮನಕದಡುವ ದೃಶ್ಯವಾಗಿತ್ತು. ವರ್ಷಗಳ ನಂತರ ಯಾವ ಜರ್ಮನನ ಮುಖದ ಮೇಲೂ ಆ ರೀತಿಯ ಸಂತೃಪ್ತಿಯ ನಗುವಿರಲಿಲ್ಲ. ತಮಗೆ ಉತ್ತಮವೆನಿಸಿದವುಗಳನ್ನು ಅವರು ನನಗೆ ತೋರಿಸಿ ಮತ್ತೊಮ್ಮೆ ನನ್ನಿಂದ ಪ್ರಶಂಸೆ ಪಡೆದರು. ಕೊನೆಗೆ ಅವುಗಳನ್ನು ತೆಗೆದಿಟ್ಟಾಗ ಸಮಾಧಾನದ ಉಸಿರೆಳೆದೆ. ತಾಯಿ-ಮಗಳಿಬ್ಬರು ನೀರು ತುಂಬಿದ ಕಂಣುಗಳಿಂದ ನೋಡುತ್ತಿದ್ದರು. ಆ ಕಣ್ಣೀರಲ್ಲಿ ಕನಿಕರದ, ಕಳವಳದ ಹಾಗು ಕೃತಜ್ಞತೆಯ ತ್ರಿವೇಣೀ ಸಂಗಮವಿತ್ತು.

ನಂತರ ಕಾಫಿ ಬಂತು. ಅವರಿಗೆ ದಣಿವಿನ ಬದಲು ಹೊಸ ಚೈತನ್ಯ ವುಂಟಾದಂತಾಗಿತ್ತು. ಪ್ರತಿಯೊಂದು ಚಿತ್ರದ ಹಿಂದೆ ಒಂದೊಂದು ಕಲೆಯ ಬಗೆ ಇತ್ತು. ಅದನ್ನು ಹೇಳುತ್ತ ಹೇಳುತ್ತ ಆ ಚಿತ್ರವನ್ನು ಮತ್ತೊಮ್ಮೆ ಹೊರ ತೆಗೆಯಲು ಯತ್ನಿಸುತ್ತಿದ್ದರು. ಅವರ ಹೆಂಡತಿ-ಮಗಳು ನಾನು ಬೇಗನೇ ಊರಿಗೆ ಹೋಗಬೇಕಾಗಿದೆ ಎಂದು ಹೇಳಿದಾಗ ಅವರು ಅನಿವಾರ್ಯವಾಗಿ ಸುಮ್ಮನಾಗಬೇಕಾಯಿತು.

ಹೊರಡಲು ಅಪ್ಪಣೆ ಕೇಳಿದೆ; ಅವರ ಸ್ವರ ಸಪ್ಪಗಾಯಿತು. ತಮ್ಮೆರಡೂ ಕೈಗಳನ್ನು ನನ್ನ ಹೆಗಲ ಮೇಲೆ ಇಡುತ್ತ ಹೇಳಿದರು. 'ನಿಮ್ಮ ಭೆಟ್ಟಿಯಿಂದ ನನ್ನ ಮನಸ್ಸು ಇಂದು ಹಗುರಾಯಿತು. ನಿಜವಾಗಿಯೂ ಕಲಾಪ್ರೇಮಿಗಳಿಗೆ ಚಿತ್ರಗಳನ್ನು ತೋರಿಸುವದರಲ್ಲಿ ಅಪಾರ ಆನಂದವಡಗಿದೆ. ನಿಮ್ಮ ಉಪಕಾರಕ್ಕಾಗಿ ನಾನೇನೂ ಮಾಡಲಾರೆ.... ...ನನ್ನ ಉಯಿಲಿನಲ್ಲಿ ನೀವೇ ನನ್ನ ಚಿತ್ರಗಳ ಮಾರಾಟದ ವ್ಯವಸ್ಥೆ ಮಾಡಬೇಕೆಂದು ಬರೆಯುತ್ತೇನೆ; ಅಷ್ಟೆ!

ಅಪಾರ ಪ್ರೀತಿಯಿಂದ ತಮ್ಮ ಕೈಗಳನ್ನು ಮೇಜಿನ ಮೇಲಿದ್ದ ಚಿತ್ರಗಳ ಮೇಲಿಟ್ಟರು—ನಿಶ್ವಾಸದೊಂದಿಗೆ ಅವರು ನುಡಿದರು.... ...'ನನ್ನ ಸಂಗ್ರಹದ ಒಂದು ಸುಂದರ ಪತ್ರ ಪ್ರಕಟಿಸಿರಿ. ಸುಂದರವಿರಬೇಕು ಅದು—ಬಹಳೇ ಸುಂದರ! ಪ್ರಕಟಿಸುವಿರಲ್ಲವೇ! ಅವುಗಳ ಮಾರಾಟದ ಪ್ರಸಂಗ ಬಂದಾಗ ದಯವಿಟ್ಟು ಅಷ್ಟು ಮಾಡಿರಿ.

ಹೊರಹೊರಡುವ ಮುನ್ನ ನಾನು ಆ ತಾಯಿ–ಮಗಳ ಕಡೆ ನೋಡಿದೆ; ಅವರು ಸುಧಾರಿಸಿಕೊಳ್ಳಲು ಯತ್ನಿಸುತ್ತಿದ್ದರು. ನಾನು ಹೊರಟುದನ್ನರಿತು ಕೃತಜ್ಞತೆಯ ಪ್ರೇಮದಿಂದ ಇಬ್ಬರೂ ನನ್ನ ಕೈ ಕುಲುಕಿದರು.

ತಾಯಿ—ಮಗಳಿಬ್ಬರೂ ನನ್ನ ಜೊತೆ ಬಾಗಿಲುವರೆಗೆ ಬಂದರು. ಅವರಿಂದೇನೂ ಮಾತನಾಡುವದಾಗಲಿಲ್ಲ. ಕಣ್ಣಿನಿಂದ ನೀರು ಹರಿಯುತ್ತಿತ್ತು. ನನ್ನದೂ ಕೂಡ ಸಾಧಾರಣ ಅದೇ ಹಾಡಾಗಿದ್ದಿತು. ನಾನೊಬ್ಬ ವ್ಯಾಪಾರಿಯಾಗಿ ಏನಾದರೂ ಪಡೆಯುವ ಆಶೆಯಿಂದ ಅಲ್ಲಿಗೆ ಹೋಗಿದ್ದೆ; ಆದರೆ ಒಂದು ಮೋಸವನ್ನು ಸುರಕ್ಷಿತವಾಗಿಡುವದರಲ್ಲಿ ಸಹಾಯ ಮಾಡಿ ಮರಳತೊಡಗಿದ್ದೆ. ವ್ಯಾಪಾರಿಯಾದರೂ ಹೇಳಲು ನಾನು ನಾಚುತ್ತಿದ್ದೆ. ಆದರೆ ಅಂದು ಆಡಿದ ಸುಳ್ಳಿಗಾಗಿ ನಾನು ಸಂತೋಷ ಪಟ್ಟಿದ್ದೆ. ಅದಕ್ಕಾಗಿ ಹೆಮ್ಮೆಯಿತ್ತು. ಇಂದಿನ ಜಗತ್ತಿನಲ್ಲಿ ದೊರೆಯಲಾರದ ಉಲ್ಲಸತೆ ಉತ್ಸಾಹವನ್ನು ನಾನು ಅವರ ಹೃದಯದಲ್ಲಿ ತುಂಬಿದ್ದೆ. ನನ್ನ ಸುಳ್ಳು ಅವರಿಗೆ ಹೊಸ ಚೈತನ್ಯ ಕೊಟ್ಟಿತ್ತು. ಬಹುಶಃ ಗಯಟೆ ಹೇಳಿದ "ಕಲಾತ್ಮಕ ವಸ್ತುಗಳನ್ನು ಸಂಗ್ರಹಿಸುವದೂ ಎಂತಹ ಸುಖಕರ" ಎಂಬ ಮಾತು ಸತ್ಯ. ಅದರ ಕಾಲ್ಪನಿಕ ಸುಖವೂ ಎಷ್ಟು ಸವಿ, ಸತ್ಯ ಎಂದು ನಾನರಿತೆ.

(The Invisible collection ಕತೆಯ ಛಾಯಾನುವಾದ)

೩

# ಕಂಡರಿಯದ ಕಣ್ಣು

ಕೋಣೆಯಲ್ಲಿ ಆ ಹುಡಗಿಯರಿಬ್ಬರೇ. ದೀಪ ಆರಿಸಲಾಗಿತ್ತು. ಹಾಸಿಗೆಯ ಬಳಿಯ ಮಂದ ಪ್ರಕಾಶದ ಹೊರತು ಸುತ್ತಲೆಲ್ಲ ಕತ್ತಲು. ಅವರಿಬ್ಬರೂ ತಮ್ಮ ಹಾಸಿಗೆಯಲ್ಲಿ ಮಲಗಿದ್ದರು. ಅವರು ಆಡಿಸುವ ಉಸಿರಿನಲ್ಲಿ ತೀವ್ರತೆ ಇರಲಿಲ್ಲ. ನೋಡುವವರಿಗೆ ಮಲಗಿರಬಹುದೆಂಬ ಕಲ್ಪನೆ ಬರುತ್ತಿತ್ತು.

"ಕೇಳಿಲ್ಲಿ" ಮೆಲ್ಲನೆ ಸೌಮ್ಯವಾದ ಸ್ವರವೊಂದು ಹಾಸಿಗೆಯಿಂದ ಹೊರಬಿತ್ತು. ಹನ್ನೆರಡು ವರುಷದ ಹುಡುಗಿ ಮಾತನಾಡುತ್ತಿದ್ದಳು.

"ಏನು" ಅವಳ ಅಕ್ಕ ಕೇಳಿದಳು; ಅವಳಿಗಿಂತ ಒಂದು ವರ್ಷ ದೊಡ್ಡವಳು; ಅಷ್ಟೆ.

"ನೀನು ಮಲಗಿರಬಹುದೆಂದು ತಿಳಿದಿದ್ದೆ. ಮಲಗಿಲ್ಲವೇ? ಸಂತೋಷ! ನಿನಗೊಂದು ಮಾತು ಹೇಳಬೇಕಾಗಿದೆ."

ಉತ್ತರವಾಗಿ ಯಾವ ಶಬ್ದವೂ ಬರಲಿಲ್ಲ. ಆದರೆ ಮಂಚ ಮಾತ್ರ ಕಿರುಗುಟ್ಟಿತು. ದೊಡ್ಡವಳು ಹಾಸಿಗೆಯಲ್ಲಿ ಎದ್ದು ಕುಳಿತಳು. ಮಂದ-ಪ್ರಕಾಶದಲ್ಲಿ ಅವಳ ಕಣ್ಣು ಹೊಳೆಯುತ್ತಿದ್ದುವು.

"ನೋಡು, ನಾನು ಹೇಳುವದು...........; ಇರಲಿ, ನೀನು ಅಕ್ಕಾ* ಅವರ ವರ್ತನೆ ಕಂಡಿಲ್ಲವೆ? ಆದರ ಬಗ್ಗೆ ಏನೂ ಎನಿಸುವದಿಲ್ಲವೆ?"

"ಹೂಂ!" ಎರಡನೆಯವಳು ಕೆಲ ಕ್ಷಣಗಳ ವರೆಗೆ ಸುಮ್ಮನಿದ್ದು ಹೇಳಿದಳು. ಏನೋ ಒಂದು ವಿಶೇಷವಿದೆ. ಆದರೆ ಅದೇನೆಂದು ಗೊತ್ತಿಲ್ಲ. ಅವರು ಮಾತ್ರ ಮೊದಲಿನಂತೆ ಇಲ್ಲ. ಎರಡು ದಿನದಿಂದಲೂ ನಾನು ಪಾಠ ಮಾಡಿಲ್ಲವಾದರೂ ಒಂದು ಶಬ್ದ ಕೂಡ ಅಂದಿಲ್ಲ. ಕಾರಣವೇನಿರಬೇಕೆಂದು ನಾನು ಯೋಚಿಸುತ್ತಿದ್ದೇನೆ. ಅವರು ನಮ್ಮ ಕಡೆಗೆ ಲಕ್ಷ್ಯಕೊಟ್ಟಂತೆಯೇ

---

* ಸ್ಕೂಲು ಮಿಸ್ಟ್ರೆಸ್ಸುಗಳಿಗೆ ಉತ್ತರ ಕರ್ನಾಟಕದಲ್ಲಿ 'ಅಕ್ಕನವರು' ಎಂಬ ವಾಡಿಕೆ.

ಕಾಣುವುದಿಲ್ಲ. ಒಬ್ಬರೇ ಕುಳಿತು ಏನನ್ನೋ ಯೋಚಿಸುತ್ತಾರೆ. ನಮ್ಮೊಡನೆ ಆಟವಾಡಲು ಕೂಡ ಬರುವುದಿಲ್ಲ.”

“ಅವರಿಗೆ ಏನೋ ಕಷ್ಟವಾಗಿರಬಹುದು. ಆದರೆ ಅವರು ತೋರಿಸಲೊಲ್ಲರು. ಈ ಎರಡು ದಿನಗಳಲ್ಲಿ ‘ಪಿಯಾನೋ’ ಬಾರಿಸಲು ಸಹ ಅವರ ಮನವೆಳಸಿದಂತಿಲ್ಲ.”

ಕ್ಷಣ ಮಾತ್ರ ಮೌನ. ಆ ಮೇಲೆ ದೊಡ್ಡವಳೇ ಕೇಳಿದಳು: “ಅಲ್ಲ ನೀನೇನೋ ಹೇಳಬೇಕಾಗಿದೆ ಎಂದೆಯಲ್ಲ!”

“ಹೂಂ ಆದರೆ ನಿನ್ನಷ್ಟಕ್ಕೇ ಇಟ್ಟುಕೊಳ್ಳಬೇಕು; ಯಾರೆದುರೂ ಒಂದು ಶಬ್ದ ಕೂಡ ಎತ್ತಬಾರದು. ಅಮ್ಮನಿಗೂ ಹೇಳಬಾರದು. ನಿನ್ನ ಗೆಳತಿಯರಿಗೂ ಹೇಳಬಾರದು”

“ಇಲ್ಲ, ಆಯಿತು ಬೇಗನೆ ಹೇಳು.” ಅಸಹನೆಯಿಂದ ತಪ್ಪಳಾಗಿ ದೊಡ್ಡವಳು ಕೇಳಿದಳು.

“ಕೇಳು; ನಾವು ಮಲಗಲು ಬಂದೆವಲ್ಲ. ನನಗೆ ಇಲ್ಲಿಗೆ ಬಂದ ಮೇಲೆ ನೆನಪಾಯಿತು. ಅಕ್ಕನವರಿಗೆ ನಾವು ರಾತ್ರಿಯ ನಮಸ್ಕಾರ ಹೇಳಿರಲಿಲ್ಲವೆಂದು; ಮತ್ತೆ ಕಾಲಲ್ಲೇಕೆ ಹಾಕಿಕೊಳ್ಳುವದೆಂದು ಬರಿಗಾಲಲ್ಲಿಯೇ ಹೇಳಹೋದೆ ಮೇಲಾಗಿ ಹಾಗೆ ಒಮ್ಮೆಲೆ ಅವರೆದುರು ಹೋದಾಗ ಅವರು ಚಕಿತರಾಗುವರೆಂದೂ ತಿಳಿದಿದ್ದೆ. ಮೆಲ್ಲನೆ ಅವರ ಕೋಣೆಯ ಬಾಗಿಲು ತೆರೆದೆ. ಕ್ಷಣಕಾಲ ಅವರು ಅಲ್ಲಿಲ್ಲವೇನೋ ಎನ್ನಿಸಿತು. ದೀಪ ಉರಿಯುತಿತ್ತು. ಆದರೂ ಅವರು ನನ್ನ ಕಣ್ಣಿಗೆ ಬೀಳಲಿಲ್ಲ. ಆದರೆ ಒಮ್ಮೆಲೆ ಯಾರೋ ಅಳುವದನ್ನು ಕೇಳಿದಾಗ ಹಾರಿಬಿದ್ದೆ. ಅವರು ಹಾಸಿಗೆಯಲ್ಲಿ ಬಿದ್ದು ಅಳುತ್ತಿದ್ದರು. ನನ್ನನ್ನು ನೋಡಲೇ ಇಲ್ಲ ಅವರ ಈ ಸ್ಥಿತಿ ಕಂಡು ನನಗೆ ವಿಚಿತ್ರವೆನಿಸಿತು. ಹೋದ ಹಾಗೆಯೇ ಹಿಂದಿರುಗಿ, ಮೆಲ್ಲನೆ ಬಾಗಿಲು ಮುಚ್ಚಿದೆ. ಹೊರಗೆ ಬಂದೆ. ಕೂಡಲೆ ನನ್ನಿಂದ ಹೆಜ್ಜೆ ಎತ್ತುವುದೇ ಆಗಲಿಲ್ಲ. ಸ್ವಲ್ಪ ಹೊತ್ತು ಅಲ್ಲಿಯೇ ನಿಂತೆ; ಬಾಗಿಲ ಸಂದಿನೊಳಗಿಂದ ಅವರು ಬಿಕ್ಕುವದು ಇನ್ನೂ ಕೇಳುತ್ತಿತ್ತು. ನಾನು ಹೊರಟು ಬಂದೆ. ನನ್ನೆದೆಯಲ್ಲಿ ಹೇಗೆ ಹೇಗೋ ಆಯಿತು.”

ಮತ್ತೆ ಯಾರೂ ಮಾತನಾಡಲಿಲ್ಲ. ಸ್ವಲ್ಪ ಹೊತ್ತಿನ ನಂತರ ದೊಡ್ಡ ವಳೇ ನಿಟ್ಟುಸಿರು ಬಿಡುತ್ತ 'ಪಾಪ!' ಅಂದಳು.

ಮತ್ತೆ ಮೌನ ಆವರಿಸಿತು.

"ಅಲ್ಲ;ಅಂದಂತೆ ಅವರು ಯಾವುದಕ್ಕಾಗಿ ಅಳುತ್ತಿರಬೇಕು" ಸಣ್ಣವಳು ಕೇಳಿದಳು: "ಇಇ ದಿನ ಯಾರೊಡನೆಯೂ ಜಗಳವಾಗಿಲ್ಲ. ಅಮ್ಮ ಕೂಡ ಏನೂ ಅಂದಿಲ್ಲ. ನಮ್ಮಿಂದಲೂ ತೊಂದರೆಯಾಗಿಲ್ಲ. ಅಂದಮೇಲೆ ಅಳ ಬೇಕೇಕೆ?"

"ಬಹುಶಃ........"

"ಏನು?"

"........"ಉತ್ತರ ಬೇಗನೆ ಬರಲಿಲ್ಲ.

"ಅವರು ಯಾರನ್ನಾದರೂ ಪ್ರೀತಿಸುತ್ತಿರಬೇಕು!"

"ಪ್ರೀತಿ!........ಆದರೆ ಯಾರನ್ನು?"

"ನೀನು ಕಂಡಿಲ್ಲವೆ?"

"ಅಣ್ಣ....ಆಗಿರಬಹುದೇನು?"

"ಹೌದು ಅಣ್ಣ. ಅವನೂ ಕೂಡ ಅವರನ್ನು ಪ್ರೀತಿಸುತ್ತಾನೆ. ಮೂರು ವರುಷಗಳ ವರೆಗೆ ಅವನು ಇಲ್ಲಿಯೇ ಇದ್ದರೂ ಒಮ್ಮೆಯೂ ನಮ್ಮೊಡನೆ ತಿರುಗಾಡಲು ಬಂದಿರಲಿಲ್ಲ. ಆದರೆ ಇೀಗ ನೀನೆ ನೋಡುತ್ತಿರುವೆಯಲ್ಲ! ಒಂದು ದಿನವಾದರೂ ತಪ್ಪಿಸುತ್ತಾನೆಯೆ? 'ಅಕ್ಕಾ'ವರು ಬರುವ ವರೆಗೆ ಅವನು ನಮ್ಮನ್ನು ಕಣ್ಣೆತ್ತಿನೋಡಿರಲಿಲ್ಲ. ಇೀಗ ಯಾವಾಗಲೂ ನಮ್ಮ ಸುತ್ತಲೇ ಸುಳಿಯುತ್ತಾನೆ. ನಾವು ಹೋದಲ್ಲೆಲ್ಲ ಇರುತ್ತಾನೆ. ನೀನು ನೋಡಿಲ್ಲವೆ?"

"ಹೌದು ಅದೇನೋ ನಿಜ. ಆದರೆ........" ಅವಳು ಮಾತು ಮುಗಿಸಲಿಲ್ಲ.

"ನಾನು ಕೂಡ ಅದರ ಬಗ್ಗೆ ತಲೆ ಕೆಡಿಸಿಕೊಂಡಿರಲಿಲ್ಲ. ಆದರೆ ಬರಬರುತ್ತ ನನಗೆ ತಿಳಿಯಿತು, ಅವನು ನಮ್ಮನ್ನು ಆಧಾರವಾಗಿಟ್ಟುಕೊಂಡಿದ್ದಾನೆಂದು."

"ಹುಡುಗಿಯರಿಬ್ಬರೂ ವಿಚಾರಿಸತೊಡಗಿದರು ಬಹಳ ಹೊತ್ತಿನ ವರೆಗೆ ಮಾತು ಕೇಳಬರಲಿಲ್ಲ. ಕೊನೆಗೆ ಸಣ್ಣವಳೇ ಮೌನ ಮುರಿದಳು:—

"ಅಲ್ಲ. ಇದೇ ಸರಿಯೆಂದುಕೊಂಡರೂ ಅವರೇಕೆ ಅಳಬೇಕು! 'ಅಕ್ಕಾ' ವರೆಂದರೆ ಅವನಿಗೆ ಪ್ರಾಣ ...—; ಅಲ್ಲದೆ ಒಬ್ಬರನ್ನು ಪ್ರೀತಿಸುವುದು ಸುಖವಲ್ಲವೇ? ನಾನಂತೂ ಇದು ವರೆಗೆ ಹಾಗೆಯೇ ತಿಳಿದಿದ್ದೆ.''

"ಅಲ್ಲದೆ ಏನು? ನಾನೂ ಕೂಡ ಹಾಗೆಯೇ ತಿಳಿದಿದ್ದೆ; ಇೀಗ ಮಾತ್ರ ನನಗೂ ಇದೊಂದು ಸಮಸ್ಯೆಯಾಗಿದೆ."

"ಪಾಪ!"

ಇನ್ನೊಮ್ಮೆ ಅವಳಿಗಾಗಿ ಅಪರ ಕನಿಕರದ ನುಡಿ ಹೊರಬಿತ್ತು.

ಆ ರಾತ್ರಿ ಅವರ ಮಾತು ಇಲ್ಲಿಗೆ ಮುಗಿಯಿತು.

ಬೆಳಿಗ್ಗೆ ಅದರ ಬಗೆಗೆ ಅವರಿಬ್ಬರಲ್ಲಿ ಯಾರೂ ಮಾತನಾಡಲಿಲ್ಲ. ಆದರೂ ತಮ್ಮಿಬ್ಬರ ವಿಚಾರ ಅದರ ಸುತ್ತಲೂ ಸುತ್ತುತ್ತಿದೆಯೆಂದು ಇಬ್ಬರಿಗೂ ಗೊತ್ತಿತ್ತು. 'ಅವರನ್ನು' ಕಂಡಾಗೊಮ್ಮೆ, ಅವರು ಒಬ್ಬರನ್ನೊಬ್ಬರು ಅರ್ಥಪೂರ್ಣ ದೃಷ್ಟಿಯಿಂದ ನೋಡುತ್ತಿದ್ದರು.

ಊಟಕ್ಕೆ ಕುಳಿತಾಗ ಅಣ್ಣನನ್ನು ಸಂಪೂರ್ಣ ಅಪರಿಚಿತನಂತೆ ನೋಡಿದರು. ಅವನೊಡನೆ ಒಂದು ಮಾತು ಕೂಡ ಆಡಲಿಲ್ಲ. ಆದರೂ ಅವರಿಬ್ಬರ ಕಣ್ಣುಗಳು ಅವನನ್ನೇ ಕಾಯುತ್ತಿದ್ದುವು. ಅವನ ಹಾಗು 'ಅಕ್ಕಾ'ವರ ನಡುವಿದ್ದ ರಹಸ್ಯವನ್ನು ಕಂಡು ಹಿಡಿಯಲು ಅವರು ಉತ್ಸುಕರಾಗಿದ್ದರು. ದಿನದಂತೆ ನಡೆಯುತ್ತಿದ್ದ ವಿನೋದದ ಮಾತುಗಳಲ್ಲಿ ಅವರಿಗೆ ಎಷ್ಟೊ ಆಸಕ್ತಿ ಇರಲಿಲ್ಲ. ಅದೊಂದೇ ಅವರಿಗೆ ಮುಖ್ಯ ವಿಷಯವಾಗಿತ್ತು. ಸಾಯಂಕಾಲ ತಂಗಿ ಅಕ್ಕನನ್ನು ಕೇಳಿದಳು.

"ಏನಾದರೂ ವಿಶೇಷ ಗೊತ್ತಾಯಿತೆ?"

"ಇಲ್ಲ''

ಆ ವಿಷಯದ ಬಗ್ಗೆ ಮಾತನಾಡಲು ಅವರಿಗೆ ಹೆದರಿಕೆಯಾಗುತ್ತಿತ್ತು. ದಿನಗಳೆದವು; ಅವರಿಬ್ಬರೂ ಮಾತಿಲ್ಲದೆ ಎಲ್ಲವನ್ನೂ ನಿರೀಕ್ಷಿಸುತ್ತಿದ್ದರು. ಬಾಯಲ್ಲಿ ಮಾತಿರದಿದ್ದರೂ ಎದೆಯಲ್ಲಿ ತಳಮಳವಿತ್ತು. ಆದರೂ ಒಂದು ವಿಚಿತ್ರ ರಹಸ್ಯವನ್ನು ಕಂಡು ಹಿಡಿಯುವ ಉತ್ಸುಕತೆ ಇತ್ತು ಅದರಲ್ಲಿ.

ಕೊನೆಗೊಮ್ಮೆ ಅವರ ಪ್ರಯತ್ನ ಫಲಿಸಿತು. ಊಟಕ್ಕೆ ಕುಳಿತಾಗ 'ಅಕ್ಕಾ'ವರು ಅವನಿಗೆ ಸನ್ನೆ ಮಾಡಿದ್ದೂ ಅವನು ತಲೆಯಲ್ಲಾಡಿಸಿ ಒಪ್ಪಿಗೆ ಸೂಚಿಸಿದ್ದೂ ಸಣ್ಣವಳ ಕಣ್ಣಿಗೆ ಬಿತ್ತು. ಭಾವನಾಪರವಶಳಾಗಿ ಅವಳು ಮೆಲ್ಲನೆ ತನ್ನ ಅಕ್ಕನ ಕಾಲು ತುಳಿದಳು. ದೊಡ್ಡವಳು ತಂಗಿಯ ಕಡೆಗೆ ನೋಡಿದಳು. ಕಣ್ಣು ಕೇಳಿದವು; ಕಣ್ಣೇ ಹೇಳಿದುವು. ಅವರ ಹೃದಯ ಕುಣಿಯುತ್ತಿತ್ತು; ಉಳಿದ ಅನ್ನ ಅವರಿಗೆ ರುಚಿಸಲೇ ಇಲ್ಲ. ಕುತೂಹಲ ದಿಂದ ಅವರು ಊಟ ಮುಗಿಯುವುದನ್ನೇ ನೋಡುತ್ತಿದ್ದರು. ಊಟ ಮುಗಿದ ಕೂಡಲೇ 'ಅಕ್ಕಾ'ವರು ತಾವಾಗಿಯೇ ಹೇಳಿದರು.

"ನೀವು ಕೋಣೆಗೆ ಹೋಗಿ ಏನಾದರೂ ಓದುತ್ತಿರಿ. ನನ್ನ ಹಣೆ ನೋಯುತ್ತಿದೆ. ನನ್ನಿಂದ ಇದಿನ ಓದಿಸುವದಾಗುವದಿಲ್ಲ. ಸಂಜೆ ಪಾಠ ಹೇಳುತ್ತೇನಂತೆ; ಆಯಿತೆ.''

ಅವರು ಕಣ್ಮರೆಯಾದ ಕೂಡಲೇ ಸಣ್ಣವಳು ಹೇಳಿದಳು. ಅವ ಳಿಂದ ಒಂದು ಕ್ಷಣವೂ ತಡೆಯುವುದಾಗಲಿಲ್ಲ.

"ನೋಡುತ್ತಿರು; ನಾನು ಹೇಳಿದಂತೆ ಅಣ್ಣ ಅವರ ಕೋಣೆಯಲ್ಲಿ ಹೋಗುತ್ತಾನೆ. ಹೋಗಲೇಬೇಕು.''

"ಅಲ್ಲದೆ ಏನು. ಅದಕ್ಕಾಗಿಯೇ ನಮಗೆ ನಮ್ಮ ಕೋಣೆಯಲ್ಲಿ ಕುಳಿತು ಓದುತ್ತಿರಿ" ಎಂದದ್ದು.

"ಬಾಗಿಲಲ್ಲಿ ನಿಂತು ನಾವು ಕೇಳೋಣವೇನು, ಅವರ ಮಾತು?—"

"ಆದರೆ ಯಾರಾದರೂ ಬಂದರೆ?"

"ಇಗ ಯಾರು ಬರುವರು?"

"ಅಮ್ಮಾ!"

"ಹೌದು ಅಮ್ಮ ಬಂದರೆ ನಮ್ಮ ಗತಿ ಮುಗಿದಂತೆಯೇ! ನಾನು ಒಲ್ಲೆಪ್ಪಾ''ಸಣ್ಣವಳು ಅಂಜಿ ಹೇಳಿದಳು.

"ನೋಡು, ನಿನಗೊಂದು ಉಪಾಯ ಹೇಳುತ್ತೇನೆ. ಹಾಗೆ ಮಾಡಿ ದರೆ ಏನೂ ಅಂಜಿಕೆಯಿಲ್ಲ. ನೀನು ಅಲ್ಲಿ ನಿಂತು ಕಾಯುತ್ತಿರು. ನಾನು ಎಲ್ಲವನ್ನೂ ಕೇಳುತ್ತೇನೆ"

ಸಣ್ಣವಳು ಮುಖ ಮುದುರಿಕೊಂಡಳು. "ಮತ್ತೆ—ನಾನು!"

"ನಾನು ಹೇಳುತ್ತೇನಲ್ಲ ಹಿಂದಿನಿಂದ."

"ನೀನು ಎಲ್ಲವನ್ನೂ ಹೇಳುವದಿಲ್ಲ....ಉಂ!"

"ಎಲ್ಲ ಹೇಳುತ್ತೇನೆ; ಆಯಿತೇ."

"ದೇವರಾಣೆ''

"ದೇವರಾಣೆ"

"ಒಳ್ಳೇದು"

"ಯಾರಾದರೂ ಬಂದರೆ ನೀನು ಕೆಮ್ಮಬೇಕು; ತಿಳೀತೇ ?''

ಉತ್ಸುಕತೆಯಿಂದ ಅವರು ಮುಂದಿನದನ್ನು ಕಾಯತೊಡಗಿದರು. ಅವರ ಎದೆ ಹಾರತೊಡಗಿದುವು. ಅಷ್ಟರಲ್ಲಿ ಯಾರದೋ ಹೆಜ್ಜೆ ಕೇಳಿಸಿತು; ಅವರು ಜಿಂಕೆಯಂತೆ ಹಾರಿ ಕೋಣೆ ಸೇರಿದರು. ಅದು ಅವರ ಅಣ್ಣ. ಅವನು ಸುತ್ತಲೂ ನೋಡಿದ. ಯಾರೂ ಇಲ್ಲವೆಂದು ಖಚಿತವಾದ ಕೂಡಲೇ ಅವರ ಕೋಣೆ ಸೇರಿ ಬಾಗಿಲು ಹಾಕಿಕೊಂಡ. ಅವನು ಒಳಗೆ ಸೇರಿದಕೂಡಲೇ ಹುಡಿಗೆಯರಿಬ್ಬರೂ ಹೊರಬಿದ್ದರು. ದೊಡ್ಡವಳು ಬಾಗಿಲಿಗೆ ಕಿವಿ ಹಚ್ಚಿ ನಿಂತಳು. ಸಣ್ಣವಳಿಗೂ ಕುತೂಹಲ ಕೆರಳಿತ್ತು. ಅವಳೂ ಇದ್ದದರಲ್ಲಿ ಸ್ಥಳ ಮಾಡಿಕೊಳ್ಳಲು ಯತ್ನಿಸಿದಳು; ಆದರೆ ಅಕ್ಕ ಸುಮ್ಮನಿರಲಿಲ್ಲ. ಸಿಟ್ಟಿಗೆದ್ದು ತಂಗಿಯನ್ನು ದಬ್ಬಿದಳು. ಅನಿವಾರ್ಯ! ಸಣ್ಣವಳು ಹೋಗಲೇಬೇಕಾಯಿತು ತನ್ನ ಕೆಲಸಕ್ಕೆ! ಎಷ್ಟೋ ನಿಮಿಷ ಕಳೆದುವು. ಒಂದೊಂದು ನಿಮಿಷವೂ ಸಣ್ಣವಳಿಗೆ ಎಲ್ಲಿಲ್ಲದ ನೋವನ್ನು ಕೊಡುತ್ತಿತ್ತು. ಅಕ್ಕ ಅಲ್ಲಿ ನಿಂತು ಎಲ್ಲವನ್ನೂ ಕೇಳುತ್ತಿರುವಾಗ ತಾನಿಲ್ಲಿ ಕಾಯಬೇಕು! ಅವಳಿಗೆ ಲಭಿಸಿದ ಭಾಗ್ಯ ತನಗಿಲ್ಲದ್ದಕ್ಕಾಗಿ ಅವಳಿಗೆ ಅಳು ಬಂದಿತು. ಆದರೆ ಅಷ್ಟರಲ್ಲಿ ಹೆಜ್ಜೆಯ ಸದ್ದು ಕೇಳಿದುದರಿಂದ ಎಚ್ಚತ್ತು ಕೆಮ್ಮಿದಳು. ಅಕ್ಕ ತಂಗಿಯರಿಬ್ಬರೂ ಒಂದೇ ನೆಗೆತಕ್ಕೆ ಕೋಣೆ ಸೇರಿದರು. ಓಡುತ್ತ ಬಂದ ಕಾರಣ ಸ್ವಲ್ಪ ಹೊತ್ತಿನ ವರೆಗೆ ಇಬ್ಬರಿಗೂ ಮಾತೇ ಬರಲಿಲ್ಲ. ಸ್ವಲ್ಪ ಉಸಿರು ತಕ್ಕೊಂಡು ಸಣ್ಣವಳು ಕೇಳಿದಳು:—

"ಏನು? ಏನೇನು ನಡೆಯಿತು ಅಲ್ಲಿ!''

ದೊಡ್ಡವಳ ಮುಖದಿಂದ ಅವಳು ಗೊಂದಲದಲ್ಲಿ ಬಿದ್ದಿರುವಳೆಂದು ಚನ್ನಾಗಿ ಕಾಣುವಂತಿದ್ದಿತು.

"ಏನೋ !"

"ಏನು ?"

"ಎಲ್ಲವೂ ವಿಚಿತ್ರವಾಗಿಯೇ ಇತ್ತು"

"ಏನೂ. ನಡೆದದ್ದಾದರೂ ಏನು ?"

"ಎಲ್ಲ ವಿಚಿತ್ರ. ನಾನು ಭಾವಿಸಿದ್ದೇ ಬೇರೆ; ಅಲ್ಲಿ ನಡೆದದ್ದೇ ಬೇರೆ. ಅವನು 'ಅಕ್ಕಾ'ವರ ಬಳಿ ಹೋದ ಕೂಡಲೇ ಅವರನ್ನು ತೋಳ ತೆಕ್ಕೆಯಲ್ಲಿ ಹಿಡಿದು ಮುತ್ತಿಡಲು ಹೋಗಿರಬೇಕು. ಆದರೆ ಅವರು 'ಇಗ ಬೇಡ; ನಿನಗೊಂದು ಮಹತ್ವದ ಮಾತು ಹೇಳಬೇಕಾಗಿದೆ' ಎಂದರು. ಬಾಗಿಲ, ಬೀಗ ಹಾಗೇ ಇದ್ದುದರಿಂದ ನನಗೇನೂ ಕಾಣುತ್ತಿರಲಿಲ್ಲ. ಆದರೆ ಎಲ್ಲವೂ ಕೇಳುತ್ತಿತ್ತು. ಅವನು 'ಏನು ?' ಎಂದು ಕೇಳಿದ. ಅವನ ಸ್ವರ ವಿಚಿತ್ರವಾಗಿತ್ತು. ಹಾಗೆ ನಾನೆಂದೂ ಕೇಳಿರಲಿಲ್ಲ. ಯಾವಾಗಲೂ ಅವನು ಗಟ್ಟಿಯಾಗಿ ನಗುತ್ತ ಮಾತಾಡುತ್ತಾನೆ: ನಿನಗೂ ಗೊತ್ತಿದೆ. ಆದರೆ ಇಂದು ಅವನು ಅಂಜಿದಂತ್ತಿತ್ತು. ಅವನ ಸ್ಥಿತಿ 'ಅಕ್ಕಾ'ವರಿಗೆ ಗೊತ್ತಾಗಿರಬೇಕು. ಅದಕ್ಕಾಗಿ ಅವರು ಏನೂ ಹೇಳಲಿಲ್ಲ—'ನಿನಗೆಲ್ಲ ಗೊತ್ತಿರಬಹುದು' ಎಂದರು. ಅವನು 'ನನಗೇನೂ ಗೊತ್ತಿಲ್ಲವಲ್ಲ' ಎಂದ. ದುಃಖದಿಂದ ನಡಗುತ್ತಿದ್ದ ಸ್ವರದಲ್ಲಿ 'ಅಕ್ಕಾ'ವರು:— "ಹಾಗಿದ್ದರೆ ನೀನೇಕೆ ನನ್ನಿಂದ ದೂರ ಸರಿಯತೊಡಗಿರುವೆ? ಒಂದುವಾರದಿಂದ ನೀನು ನನ್ನೊಡನೆ ಮಾತನಾಡಿಲ್ಲ. ಸಮಯಸಿಕ್ಕಾಗಲೆಲ್ಲ ಕಣ್ಣು ತಪ್ಪಿಸಲು ಯತ್ನಿಸುತ್ತಿರುವೆ. ಮೊದಲಿನಂತೆ ಹುಡಿಗೆಯರೊಡನೆಯೂ ಇರುವದಿಲ್ಲ. ತಿರುಗಾಡಲು ಹೋದಾಗ ಕೂಡ ನಮ್ಮ ಕಡೆ ಸುಳಿಯುವದಿಲ್ಲ. ಒಮ್ಮೆಲೆ ನನ್ನ ಬಗೆಗೆ ಚಿಂತಿಸುವುದನ್ನೇ ಬಿಟ್ಟಿರುವೆ. ನಿನ್ನ ಈ ವರ್ತನದ ಕಾರಣ ನಿನಗೆ ಗೊತ್ತಿಲ್ಲದೆ ಇಲ್ಲ." ಅಂದರು. ಆನಂತರ ಕೆಲವು ನಿಮಿಷಗಳ ವರೆಗೆ ಇಬ್ಬರೂ ಸುಮ್ಮನೆ ಇದ್ದರು. ಅಲ್ಲಿಂದ ಅವನು 'ನೋಡು ನೀನೇನು ಸಣ್ಣವಳಲ್ಲ. ನಮ್ಮ ಪರೀಕ್ಷೆ ಎಷ್ಟು ಸಮೀಪ ಬಂದಿದೆ ಎಂದು ನಿನಗೆ ಗೊತ್ತಿದೆ. ಇನ್ನು ಕೆಲವೇ ದಿನಗಳು; ಅಷ್ಟೇ. ಇಂತಹ ಹೊತ್ತಿನಲ್ಲಿ ಓದು ಬಿಟ್ಟು ಬೇರೆ ವಿಚಾರ ತರುವುದು ಹೇಗೆ ಸಾಧ್ಯ? ನೀನೇ ಹೇಳು!" ಎಂದ. 'ಅಕ್ಕಾವರು ಅಳತೊಡಗಿದರು. ಅವನೂ ಏನೂ ಮಾತನಾಡಲಿಲ್ಲ. ಸುಮ್ಮನೆ ನಿಂತಿರ

ಬೇಕು. ಅಳುತ್ತಲೇ ಅವರು ಹೇಳಿದರು: 'ದಯಮಾಡಿ ಸುಳ್ಳು ಹೇಳಬೇಡ. ನಾನು ಮಾಡಿದ ಯಾವ ತಪ್ಪಿಗಾಗಿ ನೀನು ಈ ಶಿಕ್ಷೆ ಕೊಡುತ್ತಿರುವೆ........? ನಿನ್ನ ಮೇಲೆ ಯಾವ ಬಂಧನಗಳೂ ಇಲ್ಲ. ಆದರೂ ನಾವು ಎಲ್ಲ ವಿಷಯಗಳನ್ನು ಸರಿಯಾಗಿ ತಿಳಿದುಕೊಳ್ಳುವದು ಒಳ್ಳೇದು........ನಿನ್ನ ವರ್ತನದಿಂದ ನಿನಗೆ ಎಲ್ಲವೂ ಗೊತ್ತಿರಬೇಕೆನಿಸುತ್ತಿದೆ....; ಅದು ಎಷ್ಟಾದರೂ........"

ಆ ಹುಡುಗಿಯಿಂದ ಮಾತು ಮುಗಿಸುವುದಾಗಲಿಲ್ಲ. ಅವಳ ಮೈಯೆಲ್ಲ ನಡುಗತೊಡಗಿತು. ಸಣ್ಣವಳು ಕೆರಳಿದ ಕುತೂಹಲದಿಂದ, ಆದರೂ ಭಯದಿಂದ, ಅವಳ ಮೈಯಲ್ಲಾಡಿಸುತ್ತ ಕೇಳಿದಳು:—

" ಏನು, 'ಎಷ್ಟಾದರೂ'........"

" ಅವರ ಮಗು ......."

" ಅವರ ಮಗು........! ಮಗು! ಪೂರ್ಣ ಅಶಕ್ಯ !" ಸಣ್ಣವಳೆಂದಳು

" ಆದಗೆ ಅವರೇ ಹೇಳಿದ್ದು !"

" ನೀನು ಸರಿಯಾಗಿ ಕೇಳಿರಲಿಕ್ಕಿಲ್ಲ."

" ಇಲ್ಲ ನಾನು ಚೆನ್ನಾಗಿ ಕೇಳಿದ್ದೇನೆ. ಅವರು ಒಂದು ಸಲವಲ್ಲ, ಎರಡು ಸಲ ಅದನ್ನೇ ಹೇಳಿದರು. ಆಮೇಲೆ ಸ್ವಲ್ಪ ಹೊತ್ತಿನ ನಂತರ 'ನಾವೇನು ಮಾಡಬೇಕು ಇೀಗ' ಎಂದು ಕೇಳಿದರು. ಅಲ್ಲಿಂದ........"

" ಅಲ್ಲಿಂದ........"

" ನಿನ್ನ ಕೆಮ್ಮು ಕೇಳಿಸಿತು. ನಾನು ಓಡಿ ಬಂದೆ." ಸಣ್ಣವಳಿಗೆ ಏನೂ ತಿಳಿಯಲಿಲ್ಲ. ವಿಚಿತ್ರ ಗೊಂದಲದಲ್ಲಿ ಬಿದ್ದಳು. ಕಣ್ಣುಗಳು ಅಂಜಿದಂತಿದ್ದವು.

" ಆದರೆ.... 'ಅಕ್ಕಾ'ವರಿಗೆ ಮಗುವಿರುವದು ಶಕ್ಯವೇ ಇಲ್ಲ. ಮಗು ಬರಬೇಕಾದರೂ ಎಲ್ಲಿಂದ?"

" ನಾನೂ ನಿನ್ನಂತೆಯೇ ! ನಾನೇನು ಹೇಳಲಿ ?"

" ಬಹಳ ಮಾಡಿ ಮಗು ಅವರ ಮನೆಯಲ್ಲಿರಬಹುದು. ಅಮ್ಮ ಅದನ್ನು ಇಲ್ಲಿ ತರಗೊಟ್ಟಿರಲಿಕ್ಕಿಲ್ಲ. ಅದಕ್ಕಾಗಿಯೇ ಇರಬೇಕು ಅವರು ಅಳುವುದು."

ಇಷ್ಟೆಲ್ಲ ತಾನೇ ಹೇಳಿದರೂ ಸಣ್ಣವಳಿಗೆ ಅದರಿಂದ ಸಮಾಧಾನವಾಗ ಲಿಲ್ಲ.

" ಮಗು ! ಮಗು ಹೇಗೆ ಶಕ್ಯ!! ಅದು ಬರಬೇಕಾದರೂ ಎಲ್ಲಿಂದ! ಲಗ್ನವಾದವರಿಗೇ ಮಗು ಹುಟ್ಟುತ್ತದಂತೆ 'ಅಕ್ಕಾ,ವರಿಗೆ ಇನ್ನೂ ಲಗ್ನವೇ ಆಗಿಲ್ಲ !"

" ಯಾರಿಗೆ ಗೊತ್ತು. ಅವರಿಗೆ ಲಗ್ನವಾಗಿದ್ದರೆ !!"

" ಹುಚ್ಚಳಂತೆ ಆಡಬೇಡ. ಅವರ ಮದುವೆ ಇನ್ನೂ ಆಗಿಯೇ ಇಲ್ಲ. ಅಣ್ಣನ ಜೊತೆ ಕೂಡಾ ಆಗಿಲ್ಲ "

" ಹಾಗಾದರೆ ?..........."

ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು.

" ಪಾಪ !"

ಆ ಎರಡಕ್ಷರಗಳಲ್ಲಿ ವೇದನೆಯ ಛಾಯೆಯಿತ್ತು; ಕನಿಕರವಿತ್ತು" ಆದರೂ ಅವರ ಕುತುಹಲವೇನೂ ಶಾಂತವಾಗಲಿಲ್ಲ.

" ನೀನೇನು ಹೇಳುವೆ? ಮಗು ಏನಿರಬಹುದು ! ಗಂಡೋ ಹೆಣ್ಣೋ ?" ಸಣ್ಣವಳು ಕೇಳಿದಳು.

" ಒಳ್ಳೇ ಹೇಳಿದೆ. ನಾ ಹೇಗೆ ಹೇಳಲಿ !ನನಗಾದರೂ ಏನು ಗೊತ್ತು!"

" ಅವರನ್ನೇ ಕೇಳಿದರೆ........"

" ಹುಚ್ಚು ಹಿಡಿದಿದೆಯೇನು ನಿನಗೆ ?"

" ಯಾಕೆ ಕೇಳಬಾರದು. ನಮ್ಮನ್ನು ಕಂಡರೆ ಅವರು ಜೀವ ಬಿಡು ತ್ತಾರೆ ಇಷ್ಟೂ ಹೇಳಲಾರರೆ?"

" ಉಹೂಂ ! ನಮ್ಮ ಮುಂದೆ ಇಂತಹ ಸುದ್ದಿಯೇ ಎತ್ತುವುದಿಲ್ಲ. ಅದರ ಬಗೆಗೆ ಮಾತನಾಡುತ್ತಿದ್ದಾಗ ನಾವು ಒಳಗೆ ಹೋದರಾಯಿತು. ಆ ವಿಷಯ ಅಷ್ಟಕ್ಕೇ ಬಿಟ್ಟು ಉಪಯೋಗವಿಲ್ಲದ ಮಾತು ಆಡುತ್ತಾರೆ. ನಮ್ಮನ್ನು ಇನ್ನೂ ಸಣ್ಣವರೆಂದೇ ತಿಳಿದಿರಬೇಕು. ಹಾಗೆ ನೋಡಿದರೆ ನನ ಗೀಗ ಹದಿಮೂರು ವರ್ಷ !........ ನಾವು ಎಷ್ಟು ಕೇಳಿದರೂ 'ಅಕ್ಕಾ" ವರು ಆ ವಿಷಯವಾಗಿ ಒಂದು ಶಬ್ದವನ್ನೂ ಹೇಳುವುದಿಲ್ಲ; ಕೇಳಿಯಾ ದರೂ ಏನು ಉಪಯೋಗ?"

" ಆದರೆ ಇದು ಗೊತ್ತಾಗದೆ ನನಗಂತೂ ಸಮಾಧಾನವಾಗುವಂತಿಲ್ಲ."

" ನಿನಗೊಬ್ಬಳಿಗೇ ಏಕೆ; ನನಗೂ ಕೂಡ ಪೂರ್ಣ ತಿಳಿಯಬೇಕೆಂಬ ಆಶೆಯಿದೆ "

" ಆದರೆ ನನ್ನನ್ನು ಗೊಂದಲದಲ್ಲಿ ಹಾಕಿರುವುದು ಅಣ್ಣನ ವರ್ತನೆ. ಎಲ್ಲವೂ ಗೊತ್ತಿದ್ದು ಏನೂ ಗೊತ್ತಿಲ್ಲದವನಂತೆ ವರ್ತಿಸುತ್ತಿದ್ದಾನೆಂದೆ; ಅವನು ಹೀಗೆ ಮಾಡಬಾರದು. ಕನಿಷ್ಟ ಮಗುವಿಗೋಸ್ಕರವಾದರೂ ಹೀಗೆ ಮಾಡಬಾರದು."

" ಅವನದು ಯಾವಾಗಲೂ ಹೀಗೆಯೇ !"

" ಆದರೆ, ಇಂತಹ ವಿಷಯದಲ್ಲಿ ಎಂದೂ ಹೀಗೆ ಮಾಡಬಾರದು. ಸುಮ್ಮನೆ ಎರಡನೆಯವರ ಕಾಲೆಳೆದರೆ ಏನುಪಯೋಗ ?"

ಅವರು ಬರುತ್ತಿರುವುದು ಕಾಣಿಸಿತು. ಇಬ್ಬರೂ ತಲೆ ತಗ್ಗಿಸಿಕೊಂಡು ಏನನ್ನೋ ಓದುವಂತೆಕುಳಿತರು ಆದರೆ ಅವರ ಕಣ್ಣೆಲ್ಲವೂ 'ಅವರ'ಮೇಲೆಯೇ! ಅವರ ಕಣ್ಣು ಅತ್ತು ಕೆಂಪಾಗಿದ್ದುವು. ಸ್ವರ ನಡಗುತ್ತಿತ್ತು. ಇದು ಹುಡುಗೆಯರ ಗಮನಕ್ಕೆ ಬಾರದೆ ಇರಲಿಲ್ಲ. ಅವಳಿಗಾಗಿ ಅವರಲ್ಲಿ ಹೊಸ ಗೌರವ ಹುಟ್ಟಿತ್ತು. ಅವರಿಗೂ ಒಂದು ಮಗುವಿದೆ; ಆದಕ್ಕಾಗಿ ಇಷ್ಟು ದುಃಖ, ಎಂದುಕೊಂಡರು. ಆದರೆ ಆ ದುಃಖದ ಗಾಳಿ ಇವರಿಗೂ ತಾಕದಿರಲಿಲ್ಲ.

ಮರುದಿವಸ ಊಟದ ಹೊತ್ತಿಗೆ ಅವರು ಹೊಸದೊಂದು ಸುದ್ದಿ ಕೇಳಿದರು. 'ಅವನು ಮನೆ ಬಿಟ್ಟು ಹೋಗುವವನಿದ್ದ. ಕಾರಣವೇನೂ ವಿಶೇಷವಿರಲಿಲ್ಲ. ಪರೀಕ್ಷೆ ಸಮೀಪ ಬಂದಿತ್ತು. ಅವನಿಗೆ ಮನೆಯ ಗೊಂದಲದಲ್ಲಿ ಅಭ್ಯಾಸವಾಗುತ್ತಿರಲಿಲ್ಲವಂತೆ. ಅದಕ್ಕಾಗಿ ಎರಡು ತಿಂಗಳವರೆಗೆ ಅವನು ಮನೆ ಬಿಡುವವನಿದ್ದ'.

ಭಾವನೆಯ ಆವೇಶದಿಂದ ಅವರ ಹೃದಯ ಪುಟಿಯತೊಡಗಿತ್ತು. ಅವನು ಮನೆ ಬಿಡುವುದಕ್ಕೂ ಆ ಮಗುವಿಗೂ ನಿಶ್ಚಯವಾಗಿಯೂ ಏನಾದರೂ ಸಂಬಂಧವಿರಲೇ ಬೇಕೆಂದು ಅವರು ಹೇಗೊ ಕಲ್ಪಿಸಿಕೊಂಡರು. ಹೇಡಿಯಂತೆ ಹೀಗೆ ಕಣ್ಣು ತಪ್ಪಿಸುವುದನ್ನು ಕಂಡು ಅವರಿಗೆ ಅವನ ಬಗೆಗೆ ಜಿಗುಪ್ಸೆ ಹುಟ್ಟಿತು. ಮನೆ ಬಿಡುವಾಗ ಅವನೊಂದಿಗೆ ಸರಿಯಾಗಿ ಮಾತು ಕೂಡ ಆಡಲಿಲ್ಲ. ಆದರೂ 'ಅವರೊ'ಡನೆ ಅವನ ಭೇಟಿಯನ್ನು ಅವರು

ಕುತೂಹಲದಿಂದ ಕಾಯುತ್ತಿದ್ದರು. ಆ ಭೇಟಿಯಲ್ಲಿ ವಿಶೇಷವೇನೂ ಇರಲಿಲ್ಲ. ಇಬ್ಬರೂ ಮೌನದಿಂದ 'ನಮಸ್ಕಾರವೆ'ಂದರು. ಎದೆಯಲ್ಲಿ ತಾಳದ ಬೇನೆಯಿದ್ದರೂ ತುಟಿ ಬಿಚ್ಚಲಿಲ್ಲ.

ಈ ಘಟನೆ ಹುಡುಗಿಯರ ಜೀವನದ ಮೇಲೆ ವಿಶೇಷ ಪರಿಣಾಮವನ್ನುಂಟು ಮಾಡಿತು. ಅವರು ಸಂಪೂರ್ಣ ಬೇರೆಯಾದರು. ಮೊದಲಿನಂತೆ ನಗುತ್ತಿರಲಿಲ್ಲ. ಆಡುವ ಮುಖ ಮುದುಡಿಕೊಂಡಿತು. ಹೊಳೆಯುವ ಚಂಚಲ ಕಣ್ಣುಗಳಲ್ಲಿ ಕೊರಗು ಕುಳಿತಿತು. ಮನೆಯ ಹಿರಿಯರನ್ನು ಕಂಡರೆ ಜಿಗುಪ್ಸೆಯಾಗತೊಡಗಿತು. ಯಾವಾಗಲೂ ಅದೇ ವಿಚಾರ. ಹೇಗಾದರೂ ಮಾಡಿ ರಹಸ್ಯ ತಿಳಿಯಬೇಕು.! ಯಾವ ಮಾರ್ಗದಿಂದಾದರೂ ಸರಿ; ಅದನ್ನು ಬಯಲಿಗೆಳೆಯಬೇಕು. ಅದೇ ಹಂಬಲ. ಅದಕ್ಕಾಗಿ ಅವರು ತಂದೆ-ತಾಯಿಯರ ಮಾತನ್ನು ಅಡಗಿ ಕೇಳುತ್ತಿದ್ದರು. ಹುಡುಗತನದ ಚಾಪಲ್ಯ ಎಲ್ಲಿಯೋ ಅಡಗಿಬಿಟ್ಟಿತ್ತು. ಯಾವ ಕ್ಷಣದಲ್ಲೊ ಒಂದು ಹೊಸ ಘಟನೆ ಜರುಗಬಹುದೆಂದು ಭಾವಿಸಿದ ಅವರು ಅದನ್ನು ಕಳೆದುಕೊಳ್ಳಲು ಇಚ್ಛಿಸುತ್ತಿರಲಿಲ್ಲ. ಸುತ್ತೆಲ್ಲ ಹರಡಿದ ಮೋಸ ಅವರನ್ನೂ ಮೊಸಗಾರ್ತಿಯರನ್ನಾಗಿ ಮಾಡಿತು. ಹಿರಿಯರೆದುರು ತೋರಿಕೆಗಾಗಿ ಹುಡುಗಾಟ. ಅವರು ಹೋದರೆ ಸರಿ ಮತ್ತೆ ಅದೇ. ಉಳಿದವರೆಲ್ಲ ಹಿರಿಯರೆಂಬ ಒಂದೇ ಭಾವನೆಯಿಂದ ಅವರಿಬ್ಬರೂ ತಂತಮ್ಮೊಳಗೆ ಹೆಚ್ಚು ಸಮೀಪವಾಗುತ್ತ ನಡೆದರು. ಅರಿಯದ ಯಾವುದೋ ಕಾರಣದಿಂದ ಅವರ ಜೀವನ ಸೂಕ್ಷ್ಮಪಥವನ್ನು ಹಿಡಿದಿತ್ತು.

ಅದೊಂದೇ ವಿಚಾರ ಅವರಿಗೆ ಉಳಿದೆಲ್ಲದಕ್ಕಿಂತ ಹೆಚ್ಚಿನ ತೊಂದರೆ ಕೊಡುತ್ತಿತ್ತು. ಯಾವ ತೆರದಲ್ಲೂ ತಮ್ಮ 'ಅಕ್ಕಾ'ವರಿಗೆ ಕಷ್ಟ ಕೊಡಬಾರದಾಗಿ ಅವರು ನಿರ್ಧರಿಸಿದರು. ತಾವೇ ಓದುವುದು, ತಾವೇ ಬರೆಯುವುದು; ತಪ್ಪು ಕೂಡ ತಮ್ಮಷ್ಟಕ್ಕೆ ತಾವೇ ತಿದ್ದಿಕೊಳುವುದು ನಡೆಯಿತು. ಇದಾವುದರ ಕಡೆಗೂ 'ಅಕ್ಕಾ'ವರ ಲಕ್ಷ್ಯ ಹೋಗಲಿಲ್ಲ. ಇದು ಅವರಿಗೆ ನೋವನ್ನುಂಟುಮಾಡಿತು;........ಇತ್ತೀಚಿಗೆ 'ಅವರ' ವರ್ತನೆಯೇ ವಿಚಿತ್ರವಾಗಿಬಿಟ್ಟಿತ್ತು. ಹುಡುಗಿಯರಲ್ಲಿ ಯಾರಾದರೂ ಮಾತಾಡಿಸಿದರೆ ಅವರು ಒಮ್ಮೆಲೆ ಬೆಚ್ಚಿಬೀಳುತ್ತಿದ್ದರು. ಅವರ ಕಣ್ಣಿನಲ್ಲಿ ಅನಂತ ನೋವು ಅಡ

ಗಿತ್ತು. ಅವರಿಗೆ ಯಾವುದರಲ್ಲಿಯೂ ಆಸಕ್ತಿ ಉಳಿಯಲಿಲ್ಲ. ಒಬ್ಬರೇ ಕುಳಿತು ಮೂಲೆಯಲ್ಲಿ ಏನನ್ನೋ ನೋಡುತ್ತಿದ್ದರು. ಅವರು ಅಳುತ್ತಿದ್ದುದನ್ನು ಹುಡುಗಿಯರು ಕಣ್ಣಾರೆ ನೋಡಿರಲಿಲ್ಲ ಆದರೆ ಅವರ ಕಣ್ಣುಗಳು ಯಾವಾಗಲೂ ಅತ್ತವರಂತೆ ಕೆಂಪಾಗಿರುತ್ತಿದ್ದುವು. ಅವರಿಗೆ ತಮ್ಮ ಕಷ್ಟ ಯಾರೆದುರೂ ಹೇಳುವುದು ಬೇಕಿರಲಿಲ್ಲ. ಅವರ ಕಷ್ಟದಲ್ಲಿ ತಾವು ಸಹ ಭಾಗಿಗಳಾಗದಿರುವದೇ ಆ ಹುಡುಗಿಯರ ಕೊರಗು.

ಒಂದು ದಿನ ಕಣ್ಣೊರಸಿಕೊಳ್ಳಲು ಅವರು ಕಿಟಕಿಯ ಕಡೆ ತಿರುಗಿದಾಗ ಸಣ್ಣವಳು ಧೈರ್ಯಮಾಡಿ ಅವರ ಕೈ ಹಿಡಿದು ಕೇಳಿದಳು—

"ಅಕ್ಕ, ನೀವು ಇದೀಗ ಯಾವಾಗಲೂ ಚಿಂತೆಯಲ್ಲೇ ಇರುತ್ತೀರಿ; ನಮ್ಮಿಂದ ಏನಾದರೂ ತಪ್ಪಾಗಿದೆಯೇ ?"

ಆ ಮಗುವಿನ ಮುಗ್ಧತೆ ಅವರಿಂದ ತಡೆಯುವದಾಗಲಿಲ್ಲ; ತಿರುಗಿದರು. ಅವರ ಕಣ್ಣು ನೀರಾಡುತ್ತಿದ್ದುವು. ಉಕ್ಕಿ ಬಂದ ಪ್ರೀತಿಯಿಂದ ಮೆಲ್ಲನೆ ಅವಳ ತಲೆ ನೇವರಿಸುತ್ತ ಹೇಳಿದರು—

"ಇಲ್ಲ ಮಗು; ನಿಮ್ಮಿಂದ ಏನೂ ತಪ್ಪಾಗಿಲ್ಲ. ಎಲ್ಲಾ ನನ್ನ ಹಣೆಯ ಬರಹ ಅಷ್ಟೇ !"

ಆದರೂ ಹುಡುಗಿಯರಿಗೆ ಸಮಾಧಾನವಾಗಲಿಲ್ಲ. ಅವರು ಕೂತೂಹಲದಿಂದ ವಾತಾವರಣವನ್ನು ಪರೀಕ್ಷಿಸುತ್ತಿದ್ದರು. ಒಮ್ಮೆ ಆಕಸ್ಮಿಕವಾಗಿ ಕೋಣೆ ಹೊಕ್ಕಾಗ ಒಂದೆರಡು ಶಬ್ದ ಚಿಕ್ಕವಳ ಕಿವಿಗೆ ಬಿದ್ದವು. ತಂದೆ ತಾಯಿಯರೇನೋ ಬೇಗನೆ ಆ ವಿಷಯ ಮುಚ್ಚಿದರು. ಆದರೆ ಕಿವಿಗೆ ಬಿದ್ದ ಆ ಶಬ್ದಗಳು ಅವಳನ್ನು ಆಳವಾದ ವಿಚಾರದಲ್ಲಿ ಮುಳುಗಿಸಲು ಸಾಕಾಗಿದ್ದುವು.

ತಾಯಿ ಹೇಳುತ್ತಿದ್ದರು:—

"ಹೌದು. ನನಗೂ ಆಶ್ಚರ್ಯವೆನಿಸಿದೆ. ನಾನು ಅವಳೊಡನೆ ಮಾತನಾಡುವೆ."

ಹುಡುಗಿ ತಲೆ ತುರುಸಿಕೊಳ್ಳುತ್ತ ಅಕ್ಕನ ಸಲಹೆಗಾಗಿ ಓಡಿದಳು.

ಆ ಮಾತೇ ಅವರಿಗೆ ಆಹಾರವಾಗಿತ್ತು. ಊಟದ ಸಮಯದಲ್ಲಿ 'ಅಮ್ಮ ಅಪ್ಪ' ಇಬ್ಬರೂ ಅಕ್ಕಾವರನ್ನೂ ಪರೀಕ್ಷಿಸುತ್ತಿರುವುದು ಅವರ

ಕಣ್ಣಿಗೆ ಬೀಳದೆ ಇರಲಿಲ್ಲ. ಊಟ ಮುಗಿದ ಕೂಡಲೇ ಅಮ್ಮ ಹೇಳಿದಳು- "ಸ್ವಲ್ಪ ನನ್ನರೂಮಿಗೆ ಬನ್ನಿ. ನಿಮ್ಮೊಡನೆ ಕೆಲವು ಮಾತನಾಡ ಬೇಕಿದೆ."

ಹುಡುಗಿಯರು ಭಾವನೆಯ ಭರದಲ್ಲಿ ಹುಚ್ಚರಾದರು. 'ಮುಂದೆನು?' 'ಮುಂದೆನು' ಎಂದು ಅವರ ಹೃದಯ ಒಂದೇ ಸವನೆ ಕೇಳುತ್ತಿತ್ತು. ಕದ್ದು ಕೇಳುವುದೊಂದೇ ಹಾದಿ. ಅದರಿಂದ ಅವರಿಗೆ ಇಗ ನಾಚಿಕೆ ಎನಿ ಸುತ್ತಿರಲಿಲ್ಲ. ಅದೊಂದು ಅಭ್ಯಾಸವಾಗಿಯೇ ಬಿಟ್ಟಿತ್ತು. ತಮ್ಮಿಂದ ಮುಚ್ಚಿಟ್ಟ ರಹಸ್ಯವನ್ನು ಹೇಗಾದರೂ ಮಾಡಿ ಹೊರಗೆಳೆಯಬೇಕು. ಇದೊಂದೇ ಅವರ ಗುರಿ. ಇವರ ಎಲ್ಲ ವಿಚಾರಗಳೂ ಅದರ ಸುತ್ತಲೇ ಓಡುತ್ತಿದ್ದುವು—ಸರ್ಕಸ್ಸಿನ ಕುದುರೆಗಳಂತೆ. 'ಅವರು' ತಾಯಿಯ ಕೋಣೆ ಹೊಕ್ಕ ಕೂಡಲೇ ಇವರೂ ಬಾಗಿಲಿಗೆ ಓಡಿದರು.

ಎಷ್ಟೇ ಲಕ್ಷಗೊಟ್ಟು ಕೇಳಿದರೂ ಸ್ವಲ್ಪ ಹೊತ್ತು ಸಣ್ಣಾದ ಗುಜು ಗುಜು ಶಬ್ದದ ಹೊರತು ಬೇರೇನೂ ಕೇಳುತ್ತಿರಲಿಲ್ಲ. 'ತಮಗೆ ಏನೂ ತಿಳಿ ಯಬಾರದೆಂದೇ ಇದೆಲ್ಲ' ಎಂದುಕೊಂಡರು ಅವರು. ಅಲ್ಲಿಂದ ಸ್ವರ ದೊಡ್ಡ ದಾಯಿತು. ತಾಯಿ ಸಿಟ್ಟಿನಲ್ಲಿ ಹೇಳುತ್ತಿದ್ದಳು:—

'ಹಾಗಾದರೆ ನಾವೇನು ಕುರುಡರೇ? ನಿಮ್ಮ ಸ್ಥಿತಿ ನಮಗೆ ಕಾಣು ವದಿಲ್ಲವೆಂದು ತಿಳಿದಿರುವಿರೇನು? ನಿಮ್ಮ ಸ್ಥಿತಿ ನಿಮ್ಮ ಗುಣಗಳನ್ನು ಸಾರಿ ಸಾರಿ ಹೇಳುತ್ತದೆ, ನನ್ನ ಮಕ್ಕಳನ್ನು ನಿಮ್ಮ ಕೈಲಿಟ್ಟದ್ದೇ ದೊಡ್ಡ ತಪ್ಪು. ನೀವು ಅವರಿಗೆ ಎಷ್ಟು ಓದಿಸಿರಬಹುದು-ಹೇಳುವುದೇ ಬೇಕಿಲ್ಲ. ಅವರ ಅಭ್ಯಾಸದ ಕಡೆ ಸ್ವಲ್ಪವೂ ಲಕ್ಷ್ಯಹಾಕದೆ ನಾಚಿಕೆಗೆಟ್ಟು........"

'ಅವರು' ಮೆಲ್ಲನೆ ಪ್ರತಿರೋಧಿಸಿದರು; ಅವರದೊಂದೂ ಮಾತು ಹುಡು ಗೆಯರಿಗೆ ಕೇಳಿಸಲಿಲ್ಲ.

"ಮಾತಾಡುವಿರಲ್ಲ ಮತ್ತೆ! ಮನಸ್ಸಿಗೆ ಬಂದಂತೆ ನಡೆಯುವುದು; ಮೇಲೆ ಏನಾದರೂ ಹೇಳುವುದು. ನಾಲ್ಕುದಿನ ನೀವು ನನ್ನ ಮಕ್ಕಳಿಗೆ ಓದಿ ಸಿರುವಿರೆಂದು ಯಾವ ಬಾಯಿಂದ ನಾನು ಜನರೆದುರು ಹೇಳಲಿ! ಹುಡುಗಿ ಯರ ಕಡೆಗಾದರೂ ನೋಡಬೇಕಿತ್ತು. ಹೀಗಾದರೆ ನಿಮ್ಮನ್ನು ಹೇಗೆ ಮನೆಯಲ್ಲಿಟ್ಟುಕೊಳ್ಳಬೇಕು?"

ಹುಡುಗಿಯರು ನಡುಗಿದರು. ತಾಯಿಯ ಸ್ವರದ ಕಠೋರತೆಯ ಹೊರತಾಗಿ ಅವರಿಗೇನೂ ತಿಳಿಯಲೇ ಇಲ್ಲ. ಅವಳ ಬಿಕ್ಕುವ ಸದ್ದೊಂದೇ ಆ ಕಠೋರತೆಗೆ ಉತ್ತರವಾಗಿತ್ತು. ಅವರ ಕಣ್ಣಲ್ಲಿಯೂ ನೀರು ತುಂಬಿ ಬಂದುವು.

" ಅಳುವುದೊಂದೇ ! ಇದಕ್ಕಿಂತ ಹೆಚ್ಚಿಗೆ ನೀವೇನು ಮಾಡಬಲ್ಲಿರಿ. ಆದರೆ ನಿಮ್ಮ ಕಣ್ಣೀರೆಲ್ಲ ವ್ಯರ್ಥ. ನಿಮ್ಮಂಥ ಜನರಿಗೆ ಮರುಕ ತೋರಿಸುವುದೂ ಕೂಡ ಒಂದು ಪಾಪ!............ಅವೆಲ್ಲ ಆಡಿಕೊಂಡು ನಮಗೇನು ಮಾಡುವದಿದೆ. ಹಾಳುಬಾವಿ ಬಿದ್ದುಕೊಳ್ಳಿ. ಆದರೆ ದಯಮಾಡಿ ನಾಳೆ ಸಂಜೆಯಷ್ಟರಲ್ಲಿ ನೀವು ಈ ಮನೆ ಬಿಡಬೇಕು ತಿಳಿಯಿತೇ ?"

ಅವರು ಒಂದೇಸಮನೆ ಅಳುತ್ತಿದ್ದರು. 'ಅಪದು, ಈ ರೀತಿಯಲ್ಲಿ ಅಳುವುದನ್ನು ಹುಡುಗಿಯರು ಕಂಡೇ ಇರಲಿಲ್ಲ. ಅಳುವವರ ಸಲುವಾಗಿ ಅವರಲ್ಲಿ ಮರುಕವಿತ್ತು; ಸಹಾನುಭೂತಿಯಿತ್ತು. ಇಷ್ಟು ಅಳುವವರು ತಪ್ಪು ಮಾಡಿರಲಾರರೆಂದೂ ಅವರ ತಿಳಿವಳಿಕೆ. ಸ್ವಲ್ಪ ಹೊತ್ತಿನ ನಂತರ ತಾಯಿ ಹೇಳಿದಳು:—

" ನಾನೇನು ಹೆಚ್ಚಿಗೆ ಹೇಳುವುದಿಲ್ಲ. ದಯವಿಟ್ಟು ಹಾಸಿಗೆ ಕಟ್ಟಿ; ನಾಳೆ ಮುಂಜಾನೆ ನಿಮ್ಮ ಲೆಕ್ಕ ತೀರಿಸಿಕೊಳ್ಳಿ; ಈಗ ಹೋಗಬಹುದು."

ಹುಡುಗಿಯರು ತಮ್ಮ ಕೋಣೆಗೆ ಓಡಿದರು. 'ಮುಂದೇನು' ಎಂದು ಕುತೂಹಲ ಮತ್ತೆ ಮತ್ತೆ ಕೇಳುತ್ತಿತ್ತು. ಮುಂಜಾವಿನ ಬಿಳಿಯ ಮಂಜಿನಂತೆ ಅವರಿಗೆ ಮೆಲ್ಲನೆ ಸತ್ಯದ ಅರಿವಾಗತೊಡಗಿತ್ತು. ಇಂದು ಮೊದಲನೆಯ ಸಲ ತಂದೆ ತಾಯಿಯರನ್ನು ವಿರೋಧಿಸುವ ಮನೋಭಾವನೆ ಅವರಲ್ಲಿ ಮೊಳಕೆಯೊಡೆಯಿತು.

" ಅಮ್ಮ ಇಷ್ಟೊಂದು ಕಠೋರಳಾಗಬಾರದಿತ್ತು; ಅಲ್ಲವೆ? " ದೊಡ್ಡವಳು ಕೇಳಿದಳು. ಈ ಕಟುವಾದ, ನೇರವಾದ ಟೀಕೆ ಸಣ್ಣವಳನ್ನು ಕ್ಷಣಮಾತ್ರ ಬೆಚ್ಚುವಂತೆ ಮಾಡಿತು. ಅವಳು ತೊದಲುತ್ತ ಹೇಳಿದಳು—

" ಆದರೆ....ಆದರೆ 'ಅಕ್ಕಾ'ವರ ತಪ್ಪು !"

" ತಪ್ಪು ! ಏನೂ ತಪ್ಪಿಲ್ಲ. ನನಗೆ ಪೂರ್ತಿಗೊತ್ತಿದೆ. 'ಅಕ್ಕಾ'ವರು

ತಪ್ಪು ಮಾಡುವುದು ಶಕ್ಯವೇ ಇಲ್ಲ. ನಿನಗೆ ಹೇಗೆ ಹೇಳಲಿ! ನಮಗೆ ತಿಳಿದಷ್ಟು ಅಮ್ಮನಿಗೇನು ಗೊತ್ತು?"

"ಅವರು ಅತ್ತದ್ದು ಕೇಳಿದೆಯಾ? ಅದನ್ನು ನೆನೆಸಿಕೊಂಡರೆ ಹೇಗೋ ಆಗುತ್ತದೆ."

"ಹೌದು ಪಾಪ! ಅಮ್ಮ ಆ ರೀತಿಯಿಂದ ಬೈಯಬಾರದಿತ್ತು.

ಅವರ ಕಣ್ಣುಗಳಲ್ಲಿ ಮತ್ತೆ ನೀರು ಬಂದುವು. ಅದೇ ಸಮಯಕ್ಕೆ 'ಅವರು' ಕೋಣೆಯಲ್ಲಿ ಬಂದರು. ಅವರ ಮುಖದಲ್ಲಿ ಕಳೆಯೇ ಇರಲಿಲ್ಲ. ದಿನಗಟ್ಟಲೆ ಹಾಸಿಗೆ ಹಿಡಿದು ಎದ್ದವರಂತೆ ಬಿಳುಪೇರಿತ್ತು. ಹುಡುಗಿಯರಿಗೆ ಆ ಮಧ್ಯಾಹ್ನ ಪಾಠ ಹೇಳುವುದಾಗುವದಿಲ್ಲವೆಂದು ಹೇಳಿ ಮರಳಿದಳು. ಅವರ ನಿರಾಶೆಯ ನೋಟದ ಕಡೆ ಅವರ ಲಕ್ಷ್ಯವೇ ಇರಲಿಲ್ಲ.

"ನೋಡಿದೆಯಾ ಕಣ್ಣೆಷ್ಟು ಕೆಂಪಾಗಿದ್ದುವು."

"ಪಾಪ!"

ಮತ್ತೆ ಅದೇ ಎರಡು ನುಡಿ! ಆ ಸಹಾನುಭೂತಿಪರ ನುಡಿಗಳೊಡನೆ ಅವರ ಕಣ್ಣುಗಳೂ ಕೂಡಿದುವು. ತಾಯಿ ಬಂದು ತಿರುಗಾಡಲು ಕರೆದಾಗ ಬಾಲ್ಯ-ಸಹಜವಾದ ಸಿಟ್ಟನ್ನು ನಟಿಸಿ ನಿರಾಕರಿಸಿ ಬಿಟ್ಟರು.

ತಾಯಿಯೆಂದರೆ ಅವರಿಗೆ ಅಂಜಿಕೆ ಎನಿಸತೊಡಗಿತ್ತು. ಅಮ್ಮ ತಮಗೂ ಏಕೆ ತಿಳಿಸಲಿಲ್ಲ. ಇದೊಂದೇ ಸಿಟ್ಟು– ಸುತ್ತೆಲ್ಲಾ ಸುಳ್ಳು, ಮೌನ ಆವರಿಸಿತ್ತು. ಆ ವಾತಾವರಣದಲ್ಲಿ ಅವರು ಬಾಗಿಲಿಂದ ಬಾಗಿಲಿಗೆ ಓಡಾಡಿದರು— ಸತ್ಯವನ್ನು ತಿಳಿಯಲೇಬೇಕೆಂಬ ಹಟದಿಂದ. ಸಮಯ ಬಂದರೆ 'ಅಕ್ಕಾ'ವರನ್ನು ಕೇಳಬೇಕೆಂದೂ ನಿರ್ಧರಿಸಿದರು. ಆದರೆ ನೋವಿನಿಂದ ನರಳುವ ಅವರ ಮುಖ ನೋಡಿದಾಗ ಅವರಿಗೆ ಧೈರ್ಯವಾಗುತ್ತಿರಲಿಲ್ಲ. ಜೊತೆಗೆ ಇದೆಲ್ಲ ಕದ್ದು ಕೇಳಿದ್ದು. ಇಗ ಬಹಿರಂಗವಾಗಿ ಹೇಳಲು ಕೇಳಲು ನಾಚಿಕೆ. ಆ ಮಧ್ಯಾಹ್ನ ಅವರಿಗೆ ಎದೆಯಮೇಲೆ ಕಲ್ಲಿಟ್ಟಂತಾಗಿತ್ತು. ಹಿಂದಿನದೆಲ್ಲ ನೆನೆಸುತ್ತ ಹೇಗೋ ಹೊತ್ತು ಕಳೆದರು.

ಸಂಜೆಗೆ ಅವರು ಬಂದರು; ಮಲಗುವದಕ್ಕಿಂತ ಮುಂಚೆ ಕೆನ್ನೆಗೆ ಮುತ್ತಿಟು ಮರುಳವಾಗ್ಗೆ 'ಅವರು' ಮಾತನಾಡಲು ಯತ್ನಿಸಿದರು. ಆದರೆ ಒಂದು ಶಬ್ದವೂ ಹೊರಡಲಿಲ್ಲ ಅವರು ಮೂಕ ಶೋಕಕ್ಕೆ ತುತ್ತಾಗಿ ಬಾಗಿಲ

ವರೆಗೆ ಹೋದರು, ಮತ್ತೆ ಹಿಂದಿರುಗಿದರು. ಅವರಿಬ್ಬರನ್ನೂ ಬಾಚಿ ಎದೆ ಗವಚಿಕೊಂಡರು. ಒಲುಮೆಯ ಕಟ್ಟೊಡೆಯಿತು. ಹುಡುಗಿಯರೂ ಬಿಕ್ಕಿ ಬಿಕ್ಕಿ ಅಳತೊಡಗಿದರು. ಅವರಿಂದಲೂ ತಡೆಯುವದಾಗಲಿಲ್ಲ. ಮತ್ತೊಮ್ಮೆ ಮುತ್ತಿಟ್ಟು ಹಿಂದಿರುಗಿ ನೋಡದೆ ಹೊರಟುಬಿಟ್ಟರು. ಇದು ಕೊನೆಯ ದರ್ಶನವೆಂದು ಹುಡುಗಿಯರಿಗೆ ತಿಳಿಯದಿರಲಿಲ್ಲ

" ಇನ್ನು ನಾವು ಅವರನ್ನು ಕಾಣುವದಿಲ್ಲ''

" ಹೌದು ನಾಳೆ ನಾವು ಸ್ಕೂಲಿನಿಂದ ಮರಳುವುದರಲ್ಲಿಯೇ ಹೋಗಿರುತ್ತಾರೆ "

'' ಇನ್ನೂ ಸ್ವಲ್ಪ ಹೊತ್ತಿನ ನಂತರ, ಮತ್ತೊಮ್ಮೆ ಬಂದು ತಮ್ಮ ಮಗುವನ್ನು ತೋರಿಸಬಹುದು."

" ಹೌದು, ನಾವೆಂದರೆ ಅವರಿಗೆ ಪ್ರಾಣ! ಆದರೆ ಮಗು........?''

'' ಪಾಪ !"

ಮತ್ತೆ ಸಹಾನುಭೂತಿಯ ಎರಡಕ್ಷರ: ಜೊತೆಗೆ ಕಣ್ಣೀರು.

'' 'ಅಕ್ಕಾ' ವರು ಹೋದಮೇಲೆ ನಮ್ಮ ಗತಿಯೇನು? ಅವರನ್ನು ಬಿಟ್ಟು ನಾವು ಇರಬೇಕಾದರೂ ಹೇಗೆ?''

'' ಮತ್ತೆ ಯಾರಾದರೂ ಬಂದರೆ ನನ್ನಿಂದಂತೂ ತಡೆಯುವುದೇ ಆಗುವದಿಲ್ಲ.

'' ನನ್ನಿಂದ ಆಗುತ್ತದೆ ಎಂದೆಯೇನು ?''

" ಇವರ ಕನಿಕರ, ಪ್ರೀತಿ ಮತ್ತೊಬ್ಬರಲ್ಲಿ ಇರುವುದು ಶಕ್ಯವೇ ಇಲ್ಲ. ಅಲ್ಲದೆ........"

ಅವಳು ಮಾತು ಮುಗಿಸಲಿಲ್ಲ; ಅರಿವಿಲ್ಲದ ಹೆಣ್ಣುತನ ಅವಳ ನಾಲಗೆಯನ್ನು ಹಿಡಿದೆಳೆಯುತ್ತಿತ್ತು.

" ಇಲ್ಲಿ ಕೇಳು"

" ಏನು ? "

'' ಅಲ್ಲ–ಅವರು ಹೋಗುವದಕ್ಕಿಂತ ಮುಂಚೆ ಅವರಿಗಾಗಿ ನಾವೇನೂ ಮಾಡಲಾರೆವೆ ? ಏನಾದರೂ, ನಮ್ಮ ಪ್ರೀತಿಯನ್ನು ವ್ಯಕ್ತಪಡಿಸಲು ? ನಾವು ಅಮ್ಮನಂತಲ್ಲವೆಂದು ತೋರಿಸಲು ?"

" ಓಹೋ ! ಆದರೆ ಹೇಗೆ ?"

" ನಿನಗೆ ಗೊತ್ತಿಲ್ಲ; ಬಿಳಿ ಗುಲಾಬಿಯೆಂದರೆ ಅವರಿಗೆ ಪ್ರಾಣ. ನಾಳೆ ನಸುಕಿನಲ್ಲಿಯೇ ಹೋಗಿ ತರೋಣ. ಅವುಗಳನ್ನು ಆವರ ಕೋಣೆಯಲ್ಲಿಟ್ಟ ರಾಯಿತು."

" ಆದರೆ ಯಾವಾಗ ?"

" ಸ್ಕೂಲು ಬಿಟ್ಟ ನಂತರ !"

" ಏನುಪಯೋಗ. ಅಷ್ಟು ಹೊತ್ತಿಗೆ ಅವರು ಹೋಗಿರುತ್ತಾರೆ. ನೋಡು, ಸ್ವಲ್ಪ ರಾತ್ರಿ ಇದ್ದಾಗಲೇ ಎದ್ದರೆ ಸರಿಯಾಗುತ್ತದೆ........; ಎಲ್ಲರೂ ಚಹ ಕುಡಿಯುತ್ತಿದ್ದಾಗ ಇಟ್ಟರಾಯಿತು."

" ಹೌದು ರಾತ್ರಿ ಇದ್ದಾಗಲೇ ಏಳಬೇಕು "

ಅವಸರದಿಂದ ಎದ್ದು ತಮ್ಮ ಪೆಟ್ಟಿಗೆ ತೆರೆದರು. ಹೂವಿಗಾಗಿ ಸಾಕಷ್ಟು ಹಣಕಂಡು ಅವರಿಗೆ ಎಲ್ಲಿಲ್ಲದ ಸಂತೋಷವಾಯಿತು. 'ಕೊನೆಗಾದರೂ ತಮ್ಮ ಪ್ರೀತಿಯನ್ನು ವ್ಯಕ್ತಪಡಿಸಲು ಸಾಧ್ಯವಾಯಿತಲ್ಲ' ಎಂದು.

ಮರುದಿನ ನಸುಕಿನಲ್ಲಿ ಕೈಯಲ್ಲಿ ಹೂ ಹಿಡಿದು ಅವರ ಕೋಣೆಯ ಬಾಗಿಲು ತಟ್ಟಿದಾಗ ಒಳಗಿನಿಂದ ಉತ್ತರವೇ ಬರಲಿಲ್ಲ. ಇನ್ನೂ ಮಲಗಿರ ಬಹುದೆಂಬ ಬಾಲ್ಯ ಭಾವನೆಯಿಂದ ಹಣಿಕಿಕ್ಕಿದರು. ಒಳಗಾರೂ ಇರಲಿಲ್ಲ. ಕೋಣೆ ಬರಿದಾಗಿತ್ತು. ಹಾಸಿಗೆಮೇಲೆ ಮಲಗಿದ ಗುರುತೇ ಇರಲಿಲ್ಲ. ಮೇಜಿನ ಮೇಲೆ ಎರಡು ಪತ್ರಗಳಿದ್ದುವು. ಹುಡುಗಿಯರಿಬ್ಬರೂ ಚಕಿತ ರಾದರು. ಆದದ್ದಾದರೂ ಏನು ?

" ನಾನೀಗ ನೆಟ್ಟಗೆ ಅಮ್ಮನಬಳಿ ಹೋಗುವೆ." ದೊಡ್ಡವಳು ಹೇಳಿ ದಳು. ಅವಳ ಸ್ವರದಲ್ಲಿ ಗಡುಸಿತ್ತು. ಅದು ತೋರಿಕೆಗಾಗಿರಲಿಲ್ಲ. ನಿಜಕ್ಕೂ ಅವಳು ತಾಯಿಯಲ್ಲಿಗೆ ಹೋಗಿ ಅಂಜಿಕೆಯಿಲ್ಲದೆ ಕೇಳಿದಳು:—

" 'ಅಕ್ಕಾ'ವರೆಲ್ಲಿ ?"

" ಕೋಣೆಯಲ್ಲಿರಬೇಕು "

" ಇಲ್ಲ ಕೋಣೆಯಲ್ಲಿ ಯಾರೂ ಇಲ್ಲ. ಹಾಸಿಗೆ ಹಾಸಿದಂತೆಯೇ ಇದೆ. ಅವರು ಮಲಗಿಯೇ ಇಲ್ಲ. ರಾತ್ರಿಯೇ ಹೋಗಿರಬೇಕು. ಇದೆಲ್ಲ ನಮಗೇಕೆ ಹೇಳಲಿಲ್ಲ ?"

ಅವಳು ಹುಡುಗಿಯ ಕೊನೆಯ ಮಾತಿನ ಕಡೆ ಲಕ್ಷ್ಯವೇ ಕೊಡಲಿಲ್ಲ. ಅವಳ ಎದೆಯೊಡೆಯಿತು. ನಡುಗುವ ಸ್ವರದಲ್ಲಿ ಗಂಡನನ್ನು ಕೂಗಿದಳು.

"ಅವನು ಕೋಣೆಯಿಂದ ಹೊರಳಿದಾಗ ಕೈಯಲ್ಲಿ ಎರಡು ಪತ್ರಗಳಿದ್ದುವು. ಪರಿಸ್ಥಿತಿಯ ಪರಿಣಾಮ ಅವನ ಮೇಲೆಯೂ ಆಗಿತ್ತು. ತಾಯಿ ತಂದೆ ಇಬ್ಬರೂ ಕೋಣೆ ಸೇರಿದರು. ತಂದೆಯ ಮುಖ ನೋಡಿದಾಗಲೇ ಅವರ ಎದೆಯೊಡೆದಿತ್ತು. ಕದ್ದು ಕೇಳಲು ಅವರಿಗೆ ಧೈರ್ಯವಾಗಲಿಲ್ಲ. ತಾಯಿ ಹೊರಗೆ ಬಂದಾಗ ಅವಳು ಕೋಣೆಯಲ್ಲಿ ಅತ್ತಿರಬೇಕೆನಿಸಿತು ಅವರಿಗೆ. ಅವರು ಕೇಳಬೇಕೆನ್ನುವದರಲ್ಲಿಯೇ ಅವಳು ಹೇಳಿದಳು:—

"ನಡೆಯಿರಿ ಸ್ಕೂಲಿಗೆ ಹೊತ್ತಾಗುವದಿಲ್ಲವೆ ?"

ಅವರಿಗೆ ಹೋಗಲೇಬೇಕಾಯಿತು. ಎದುರಿಸುವ ಧೈರ್ಯವಾಗಲಿಲ್ಲ. ಕ್ಲಾಸಿನಲ್ಲಿ ಏನು ನಡೆಯುತ್ತಿತ್ತೋ ಅದೊಂದೂ ಅವರಿಗೆ ತಿಳಿಯದು. ಅದೇ ಯೋಚನೆ. ಶಾಲೆ ಬಿಟ್ಟಕೂಡಲೇ ಮನೆಗೋಡಿದರು. ಅಲ್ಲಿಕೂಡ ಅದೇ ವಿಚಾರ ಮುದ್ರೆಯೊತ್ತಿತ್ತು. ಮನೆ ಸೇರುತ್ತಲೆ ತಾಯಿ ತಾನೇ ಮುಂದುವರಿದು ಪಾಠ ಮಾಡಿದ ಆ ನಾಲ್ಕು ಶಬ್ದ ಹೇಳಿದಳು:—

"ಮಗು, ನೀವಿನ್ನು ನಿಮ್ಮ 'ಅಕ್ಕಾ' ವರನ್ನು ಕಾಣಲಾರಿರಿ. ಅವರು........" ಹುಡುಗಿಯರ ಕಣ್ಣಲ್ಲಿದ್ದ ಕೋಪ, ತೀಕ್ಷ್ಣತೆ, ತಿರಸ್ಕಾರ ಅವಳ ಧೈರ್ಯವೆಲ್ಲವನ್ನು ಕಸಿದುಕೊಂಡಿತು. ಅವಳಿಂದ ಸುಳ್ಳು ಹೇಳುವದಾಗಲಿಲ್ಲ. ಮಾತು ಅಲ್ಲಿಗೇ ನಿಲ್ಲಿಸಿ ಕೋಣೆ ಸೇರಿದಳು.

ಮಧ್ಯಾಹ್ನ ಅವನೂ ಮನೆಗೆ ಬಂದ. ಒಂದು ಪತ್ರ ಅವನ ಹೆಸರಿನಲ್ಲಿತ್ತು. ಅದಕ್ಕಾಗಿ ಅವನನ್ನು ಕರೆಸಿದ್ದರು. ಅವನೊಡನೆ ಯಾರೂ ಮಾತನಾಡಲಿಲ್ಲ. ಹುಡುಗಿಯರಂತೂ ಅವನನ್ನು ಕಂಡರೆ ಸಿಡಿದೇಳುತ್ತಿದ್ದರು

ಕ್ಷಣ ಹೊತ್ತು ಅವನು ಕೋಣೆಯಲ್ಲಿದ್ದು ಅಲ್ಲಿಂದ ಹೊರಟು ಹೋದ. ಹುಡುಗಿಯರನ್ನು ಯಾರೂ ಮಾತನಾಡಿಸಲಿಲ್ಲ; ನೀರುದುಂಬಿದ ಕಣ್ಣುಗಳಿಂದ ಒಬ್ಬರನ್ನೊಬ್ಬರು ನೋಡುತ್ತ ಎಲ್ಲ ಕೋಣೆ ತಿರುಗಿದರು. ಇಗಾಗಲೇ ಅವರಿಗೆ ಎಲ್ಲವೂ ಗೊತ್ತಾಗಿತ್ತು. ತಮಗೆ ಮೋಸ ಮಾಡಿರುವದಾಗಿ ಅವರು ಕಂಡುಕೊಂಡಿದ್ದರು. ಮನುಷ್ಯ ಎಷ್ಟು ಕೀಳಾಗಬಹುದೆಂಬುದನ್ನೂ ಅವರು ಕಣ್ಣಾರೆ ನೋಡಿದ್ದರು. 'ಅಮ್ಮ-ಅಪ್ಪ' ಎಲ್ಲರೂ ಒಂದೇ. ಇನ್ನು

ಮುಂದೆ ಯಾರನ್ನೂ ನೋಡಬಾರದಾಗಿ ನಿರ್ಧರಿಸಿದರು. ಬಾಳಿನ ಭಾರ ವೆಲ್ಲ ಅವರ ನಿಸ್ಸತ್ವ ಹೆಗಲಿನಮೇಲೆ ಹೇರಿದಂತಿತ್ತು. ಚಲ್ಲಾಟ ಹಿಂದು ಳಿದು ಅದರ ಸ್ಥಳದಲ್ಲಿ ಭೀತಿ ನೆಲೆಸಿತ್ತು. ನಡೆದ ಘಟನೆಯ ಸತ್ಯ ಸ್ವರೂ ಪದ ಅರಿವು ಅವರಿಗಿನ್ನೂ ಆಗಿರಲಿಲ್ಲ. ಆದರೂ ಅವರು ಅದೇ ದೆಶೆಯಲ್ಲಿ ಹೋರಾಡುತ್ತಿದ್ದರು. ಯಾರೊಬ್ಬರೂ ಅವರ ಸಮೀಪ ಸುಳಿಯಲಿಲ್ಲ. ಅವರ ಆತ್ಮದ ಬಾಗಿಲು ಮುಚ್ಚಿದುವು– ಬಹುಶಃ ಮುಂಬರುವ ವರ್ಷಗಳಿ ಗಾಗಿ; ಆ ಒಂದು ದಿನದಲ್ಲಿ ಅವರ ಬಾಲ್ಯ ಕಳೆದಿತ್ತು. ಅವರು ದೊಡ್ಡವ ರಾಗಿದ್ದರು.

ರಾತ್ರಿ ಮಲಗುವ ವರೆಗೆ ಅವರಿಗಾವ ಭೀತಿಯೂ ಇರಲಿಲ್ಲ. ಆದರೆ ಮಲಗುವ ಕೋಣೆಯ ಏಕಾಂತತೆಯಲ್ಲಿ ಸತ್ತವಳ ನೆನಪು ಬಂದು ಅಂಜಿಕೆ ಹುಟ್ಟಿತು. ಅವರಿಬ್ಬರೂ ಒಂದೇ ಹಾಸಿಗೆಯಲ್ಲಿ ಒಬ್ಬರನ್ನೊಬ್ಬರು ಅಪ್ಪಿ ಕೊಂಡು ಮಲಗಿದರು. ಇಷ್ಟಾದರೂ ಅವರ ಬಾಯಿಂದ ಒಂದು ಶಬ್ದವೂ ಬರಲಿಲ್ಲಿ. ಕೊನೆಗೆ ಸಣ್ಣವಳ ಎದೆ ಉಕ್ಕಿಬಂತು; ಕಣ್ಣು ನೀರು ಚಿಮ್ಮಿ ದುವು. ದೊಡ್ಡವಳೂ ಬಿಕ್ಕುತ್ತಿದ್ದಳು. ದೊಡ್ಡವರಿರುವ ಜಗತ್ತೆಲ್ಲವೂ ಅವ ರಿಗೆ ಕಲ್ಲುಮುಳ್ಳುಗಳಿಂದ ತುಂಬಿದ ಕಾಡಡವಿಯಾಗಿ ಕಾಣಿಸಿತು.

ಆದರೆ ಆ ವಾತಾವರಣ ಬಹಳ ಹೊತ್ತಿನವರೆಗೆ ಉಳಿಯಲಿಲ್ಲ. ಮೆಲ್ಲನೆ ಅವರು ಬಿಕ್ಕುವದು ಕಡಿಮೆಯಾಯಿತು. ಅವರ ಉಸಿರಿನಲ್ಲಿ ಸಮತೆ ಸೇರಿತು. ಅವರು ನಿದ್ದೆ ಹೋದರು.

("Governess" ಕತೆಯ ಛಾಯಾನುವಾದ)

೭

# ಕತೆಯ ಕೊನೆ

'ನೀವೊಬ್ಬರು ಕತೆಗಾರರಿರಬಹುದು; ಕಾದಂಬರಿಕಾರರಿರಬಹುದು; ಒಂದು ಘಟನೆ ಹೇಳುತ್ತೇನೆ ಕೇಳಿ. ಅದರ ಆಧಾರದಿಂದ ನೀವು ಒಂದು ಒಳ್ಳೇ ಕತೆ ಕಾದಂಬರಿ ಬರೆಯ ಬಹುದು. ಘಟನೆಗೂ ನನಗೂ ನಿಕಟ ಸಂಬಧವಿದೆ. ಅದೂ ಕೂಡ....—'

ಆ ವೃದ್ಧ ಸಜ್ಜನರು ನಡುವೇ ಕ್ಷಣ ಕಾಲ ತಡೆದರು. ನಡೆದ ಘಟನೆಯನ್ನು ನನಗೆ ಹೇಳಬೇಕೋ ಬಾರದೋ ಎಂದು ಯೋಚಿಸುತ್ತಿರುವಂತೆ ತೋರಿತು. ನಾನು ಏನೂ ಹೇಳಲಿಲ್ಲ. ಇಂತಹ ಪ್ರಸಂಗಗಳಲ್ಲಿ ಸುಮ್ಮನಿರುವದು ತುಂಬ ಫಲಕಾರಿಯೆಂದು ನನಗೆ ಗೊತ್ತಿತ್ತು.

ನಾನು ಕೆಡನೇವಿಯಾಕ್ಕೆ ಬಂದು ಬಹಳ ದಿನ ಕಳೆದಿರಲಿಲ್ಲ. ಕಿಲಕಿಲ ನಾದದಿಂದ ಹರಿಯುವ ಝರಿಯ ದಡದಲ್ಲಿ, ನಿಸರ್ಗದೇವಿಯ ಮಡಲಲ್ಲಿ ನಿಶ್ಚಿಂತೆಯಿಂದ ಬೆಳೆದ ವೃಕ್ಷಗಳ ನೆರಳಲ್ಲಿ ಕುಳಿತು ಬೇಸಗೆಯ ದಿನಗಳನ್ನು ಕಳೆಯುವದೂ ಒಂದು ಆನಂದ. ನಿಸರ್ಗ ನಿರ್ಮಿತವಾದ ಆ ದಟ್ಟ ಗಿಡಿಗಳ ನಟ್ಟ ನಡುವೆ ನಿಂತ ಮಾನವ ನಿರ್ಮಿತ ಸೌಧಗಳೂ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ನಾನು ಉಳಿದುಕೊಂಡ ಹೋಟೆಲಿನಲ್ಲಿ ವಿಶೇಷ ಗದ್ದಲವಿರಲಿಲ್ಲ. ಇದ್ದ ಒಬ್ಬಿಬ್ಬರೂ ಮತ್ತೊಬ್ಬರೊಡನೆ ಬೆರೆಯುತ್ತಿರಲಿಲ್ಲ. ದೂರ ದೂರವೆ ಇರುತ್ತಿದ್ದರು. ಇದ್ದವರಲ್ಲಿಯೇ ನನ್ನ ಲಕ್ಷ್ಯವನ್ನು ಸೆಳೆದವರು ಆ ವೃದ್ಧ ಸಜ್ಜನರು. ಇವರು ಹೆಚ್ಚಾಗಿ ಯಾವುದಾದರೂ ಒಂದು ನಿರ್ಜನ ಸ್ಥಳದಲ್ಲಿ ಕುಳಿತು ಬಿಡುತ್ತಿದ್ದರು. ಅದೊಂದು ದಿವಸ. ಸಹಜವಾಗಿಯೇ ನನ್ನ ಅವರ ಪರಿಚಯವಾಯಿತು. ಅವರು ತೋರಿದ ಸೌಜನ್ಯ, ಸದ್ವರ್ತನೆ ನಮಿಬ್ಬರ ನಡುವೆ ಇದ್ದ ವಯಸ್ಸಿನ ಅಂತರವನ್ನು ಮರೆಯುವಂತೆ ಮಾಡಿದವು. ಅಂದಿನಿಂದ ನಾವಿಬ್ಬರೂ ಗೆಳೆಯರಾದೆವು. ಆತ್ಮೀಯರಾದೆವು.

'ಹಾಂ! ನಾನು ನಿಮಗೆ ಹೇಳುತ್ತಿದ್ದೆ' ಅವರು ತಮ್ಮ ಬಾಯಲ್ಲಿದ್ದ 'ಪೈಪಿ'ನಿಂದ ಒಂದು ದೀರ್ಘವಾದ ಸೆಳೆತವನ್ನು ಎಳೆಯುತ್ತ ಹೇಳಿದರು. " ಆ ಘಟನೆ ನನ್ನ ಜೊತೆಗೇನೇ ಜರುಗಿದೆ ಎನ್ನಬೇಕು. ಅದೂ ಬಹಳ ದಿನದ ಮಾತಲ್ಲ. ಹೋದ ವರ್ಷ. ಆಗಲೂ ಕೂಡ ಈ ಹೋಟೆಲು, ನೀವು ನೋಡುತ್ತಿದ್ದಿರಲ್ಲ, ಇದೇ ರೀತಿಯಾಗಿದ್ದಿತು. ಒಂದು ಕೋಣೆಯಲ್ಲಿ 'ಮಿಲಾನ್' ನಿವಾಸಿಗಳೊಬ್ಬರಿದ್ದರು. ದಿನವೆಲ್ಲ ಮೀನು ಹಿಡಿಯುತ್ತಿದ್ದರು. ಸಂಜೆಯಾದ ಕೂಡಲೆ ಹಿಡಿದ ಮೀನುಗಳನ್ನು ನೀರಲ್ಲಿ ಬಿಟ್ಟು ಕೋಣೆ ಸೇರುತ್ತಿದ್ದರು. ಯಾರೊಡನೆಯೂ ಮಾತಾಡುತ್ತಿರಲಿಲ್ಲ. ಮೌನವೇ ಅವರ ಸಂಗಾತಿ. ಆಗ ಇಲ್ಲಿ ಇಬ್ಬರು ಇಂಗ್ಲಿಷ ಜನರಿದ್ದರು ಆದರೆ ಅವರಿದ್ದಾರೆಂದು ಕೂಡ ಮತ್ತೊಬ್ಬರಿಗೆ ಗೊತ್ತಿರಲಿಲ್ಲ. ಅವರದೂ ಅಷ್ಟೊಂದು ಮೌನ. ಆಚೆಗಿನ ಎರಡು ಕೋಣೆಗಳಲ್ಲಿ ತರುಣ ದಂಪತಿಗಳಿಬ್ಬರು ವಾಸಿಸುತ್ತಿದ್ದರು. ಅದಾದ ನಂತರ ಎದುರಿನ ಕೋಣೆಗಳಲ್ಲಿ ಒಂದು ಜರ್ಮನ್ ಕುಟುಂಬ ನೆಲಸಿತ್ತು. ಕುಟುಂಬವೆಂದರೇನು? ಇಬ್ಬರು ವಯಸ್ಸಾದ ಮಹಿಳೆಯರು. ಒಬ್ಬಳು ಹದಿನಾರು-ಇಲ್ಲವೆ ಹದಿನೇಳಿರಬೇಕು-ವಯಸ್ಸಿನ ತರುಣಿ ಅವರಲ್ಲಿ ಯಾರದಾದರೊಬ್ಬಳ ಮಗಳಿರಬೇಕು. ಆಯಿತು. ಅವರಿಬ್ಬರೂ ದಿನವೆಲ್ಲ ಹೊಲಿಯುತ್ತಲೊ ಕಸೂತಿ ಹಾಕುತ್ತಲೊ ಕುಳಿತಿರುತ್ತಿದ್ದರು. ಅವರನ್ನು ಕಂಡಾಗೊಮ್ಮೆ ಮೆದುಳಿನ ಶೂನ್ಯತೆಯೆಲ್ಲವನ್ನೂ ಅವರು ತಮ್ಮ ಜೀವನದಲ್ಲಿ ತುಂಬಿಕೊಂಡಂತೆ ಅನಿಸುತ್ತಿತ್ತು. ಆದರೆ ಆ ಹುಡುಗಿ........! ಆ ಹುಡುಗಿ ಯಲ್ಲಿ ಇನ್ನೂ ಚಂಚಲತೆ ಇತ್ತು. ಹೆಣ್ಣುತನ ಹೊರಬೀಳಲು ಇಣುಕುತ್ತಿತ್ತು.

'ತನ್ನ ಮನೆಯವರಂತೆ ಆ ಹುಡುಗಿಯೂ ಕೂಡ ಯಾವಾಗಲೂ ಯಾವುದಾದರೊಂದು ಕೆಲಸ ಕೈಯಲ್ಲಿ ಹಿಡಿದಿರುತ್ತಿದ್ದಳು. ಆದರೆ ಅದರಲ್ಲಿ ಅವಳ ಮನಸ್ಸು ಎಷ್ಟೂ ಇರುತ್ತಿರಲಿಲ್ಲವೆಂಬುದು ಸ್ಪಷ್ಟ ಕಾಣುವಂತಿದ್ದಿತು. ಕೆಲಸ ಮಾಡುತ್ತಿದ್ದಂತೆಯೇ ಅವಳ ಕೈಗಳು ನಿಂತು ಬಿಡುತ್ತಿದ್ದುವು. ಭಾವನಾ ಪರವಶಳಾಗಿ ಸಜಲ ನಯನಗಳಿಂದ 'ಝುರಿ'ಯ ಕಡೆಗೆ ದಿಟ್ಟಿಸು ತ್ತಿದ್ದಳು. ಕಣ್ಣು ಯಾರನ್ನೊ ಹುಡುಕುತ್ತಿದ್ದುವು ಇವೆಲ್ಲವುಗಳಿಂದ ಅವಳಿ ಗಿನ್ನೂ ಜೀವನದ ಸಂಗಾತಿಯ ಪ್ರಥಮದರ್ಶನದ ಭಾಗ್ಯ ಕೂಡ ಲಭಿಸಿಲ್ಲ ವೆಂದು ಕಂಡು ಬರುತ್ತಿದ್ದಿತು.

‘ಯಾರೇನು ಮಾಡುವದು. ಯೌವನದ ಕಾಲವೇ ಅಂತಹದು. ಆ ವಯಸ್ಸಿನಲ್ಲಿ ಮನುಷ್ಯ, ತನ್ನ ಹೃದಯದಲ್ಲಿ ಅಡಗಿದ್ದುಕೊಂಡು, ವಿಚಿತ್ರ ಅನುಭವವನ್ನು ಕೊಡುವ ಒಂದು ಆಶೆಯ ತೃಷ್ಣೆಯನ್ನು ತಣಿಸಲು ಯಾವುದೋ ಒಂದು ಮಾರ್ಗವನ್ನು ಅನುಸರಿಸುತ್ತಾನೆ. ಅದು ಒಳ್ಳೆಯದೆ ಇರಲಿ. ಕೆಟ್ಟದೆ ಇರಲಿ. ಆ ಹುಡುಗಿಯೂ ಇದಕ್ಕೆ ಅಪವಾದವಾಗಲಿಲ್ಲ. ಅವಳ ಕಣ್ಣುಗಳಲ್ಲಿ ಒಂದು ಉತ್ಸುಕತೆ ಕುಣಿಯುತ್ತಿತ್ತು. ಒಂದು ಆಶೆ ಲಾಸ್ಯವಾಡುತ್ತಿತ್ತು. ಯಾರೆದುರಾದರೂ ತನ್ನ ಹೃದಯವನ್ನೇ ತೆರೆದಿಡಲು ಆತುರಳಿದ್ದಂತೆ ತೋರುತ್ತಿತ್ತು. ಆದರೆ ಯಾರೆದುರು! ಮಾತನಾಡಲು ಕೂಡ ಅವಳೊಡನೆ ಯಾರೂ ಇರಲಿಲ್ಲ. ಇದ್ದೂ ಬಿದ್ದು, ಆ ವಯಸ್ಸಾದ ಹೆಂಗಸರಿಬ್ಬರೆ. ಅವರ ನಡುವೆ ಇದ್ದೂ ಕೂಡ ಅವಳು ಏಕಾಕಿಯಾಗಿದ್ದಳು. ಅವಳನ್ನು ಕಂಡು ನನಗೆ ಮರುಕ ಹುಟ್ಟಿತು; ಅಯ್ಯೋ ಎನ್ನಿಸಿತು. ಆದರೆ ನಾನು ಮುಂದುವರಿದು ಏನೂ ಮಾಡುವಂತಿರಲಿಲ್ಲ. ನನ್ನಂತಹ ವಯಸ್ಸಾದ ಮನುಷ್ಯನಲ್ಲಿ ಅದೆಂತು ಅವಳಿಗೆ ಅಭಿರುಚಿ ಹುಟ್ಟಬೇಕು........’’

‘ಪೈಪು’ ಆರಿಹೋಗಿತ್ತು. ಅದನ್ನು ಹೊತ್ತಿಸುತ್ತ ಅವರು ಮತ್ತೆ ಮುಂದುವರಿಸಿದರು. ‘‘ಸಹಜವಾಗಿ ನನ್ನ ತಲೆಯಲ್ಲಿ ಒಂದು ವಿಚಿತ್ರ ವಿಚಾರ ಸುಳಿಯಿತು. ‘ಅವಳು ಅದೇ ತಾನೆ ಸ್ಕೂಲಿನಿಂದ ಹೊರಗೆ ಬಂದಿದ್ದಾಳೆ. ಜಗತ್ತಿನ ಅನುಭವವಿಲ್ಲ. ಕತೆ, ಕಾದಂಬರಿಗಳ ಸುವರ್ಣ ಮಯ ಕಾಲ್ಪನಿಕ ವಾತಾವರಣ ಇನ್ನೂ ಅಡಗಿಲ್ಲ. ಅವಳು ಇನ್ನೂ ಅದೇ ಕನಸು ಕಾಣುತ್ತಿದ್ದಾಳೆ. ಅದನ್ನೇ ಸರ್ವಸ್ವವಾಗಿ ತಿಳಿದಿದ್ದಾಳೆ’ ಎಂದು ನನಗೆ ಎನಿಸಿತು. ನನ್ನ ಈ ರೀತಿಯ ಅನಿಸಿಕೆಗೆ ಕಾರಣವೇನಿತ್ತೋ ಹೇಳಲಾರೆ. ನನಗೂ ಗೊತ್ತಿರಲಿಲ್ಲ. ಆದರೆ ನನ್ನ ಅನಿಸಿಕೆ ಆಗ ಪೂರ್ಣ ಸರಿ ಅನಿಸಿತು. ನಾನು ಈ ವಿಚಾರವನ್ನು ಕಣ್ಣೆದುರು ಇಟ್ಟುಕೊಂಡು ಅವಳಿಗೆ ಒಂದು ಸುದೀರ್ಘವಾದ ಪತ್ರ ಬರೆದೆ. ಜರ್ಮನ ಭಾಷೆಯಲ್ಲಿ ಬರೆದ ಆ ಪತ್ರದ ಪ್ರತಿಯೊಂದು ಶಬ್ದದಿಂದ ಒಲವು ಒಸರುವಂತಿದ್ದಿತು. ಹಾಂ. ಹಾಗೆ ನೋಡಿದರೆ ಆ ಪತ್ರದಲ್ಲಿ ವಿಶೇಷವೇನೂ ಇರಲಿಲ್ಲ. ಅದರಲ್ಲಿ ಬರಹ ಗಾರನ ಯೋಚನೆ ಇರಲಿಲ್ಲ. ಸೂಚನೆ ಇರಲಿಲ್ಲ. ಇಷ್ಟೇ ಅಲ್ಲ; ಕೆಳಗೆ ಸಹಿ ಕೂಡ ಇರಲಿಲ್ಲ. ಅಂತಹ ಪ್ರೇಮ ಪತ್ರಗಳು ನಿಮಗೆ ಕಾದಂಬರಿಗಳಲ್ಲಿ ಸಾಕಷ್ಟು ನೋಡಲು ಸಿಕ್ಕುತ್ತವೆ.

'ಇನ್ನು ಅದು ಅವಳ ಕೈ ಸೇರುವಂತೆ ಮಾಡಬೇಕು. ಅದು ಅಷ್ಟೇನೂ ಕಠಿಣವಿರಲಿಲ್ಲ. ಆ ಹುಡುಗಿ ಎಲ್ಲರಕ್ಕಿಂತ ಮುಂಚೆ ಊಟದ ಕೋಣೆಯಲ್ಲಿ ಬಂದು ಕೂಡುತ್ತಿದ್ದಳು. ಇದನ್ನು ನಾನು ಕಂಡು ಹಿಡಿದಿದ್ದೆ. ಇದನ್ನು ತಿಳಿದೇ ನಾನು ಆ ಪತ್ರವನ್ನು ಯಾರಿಗೂ ಕಾಣದಂತೆ ಅವಳ 'ನೆಪಕಿನ್' ದಲ್ಲಿ (Napkin) ಅಡಗಿಸಿಟ್ಟೆ. ಮರುದಿನದ ಬೆಳಗಿನೊಡನೆ ನನ್ನ ಕುತೂಹಲವೂ ಜಾಗೃತವಾಗಿತ್ತು. ಆ ಪತ್ರ ಅವಳ ಮೇಲೆ ಯಾವ ಪ್ರಭಾವವನ್ನು ಬೀರುವುದೆಂದು ನಾನು ಅಡಗಿ ನೋಡತೊಡಗಿದೆ. ಚಹದ ಸಮಯ ಸಮೀಪಿಸಿತು. ಯಾವುದೊ ಒಂದು ಹೊಸತನ್ನು ಕಂಡು ಹಿಡಿಯುವ ವಿಜ್ಞಾನಿಯಂತೆ ನಾನು ಅವಳ ಬರುವನ್ನು ಕುತೂಹಲದಿಂದ ನೋಡುತ್ತಿದ್ದೆ. ಅವಳು ಬಂದು ಕುಳಿತಳು. ನೆಪಕಿನ್ ಎತ್ತಿದೊಡನೆಯೆ ಆ ಪತ್ರ ಅವಳ ಕಣ್ಣಿಗೆ ಬಿತ್ತು. ಅವಳ ಮುಖದ ಮೇಲೆ ಆಶ್ಚರ್ಯ, ಸಂಶಯ ಮೂಡಿ ನಿಂತವು. ಲಜ್ಜೆಯಿಂದ ಕೆನ್ನೆ ಕೆಂಪೊಡೆದವು. ಬೆದರಿದ ಕಣ್ಣುಗಳನ್ನು ನಾಲ್ಕೂ ಕಡೆ ಹೊರಳಿಸಿ ಅವಳು ನಡುಗುವ ಕೈಯಿಂದ ಆ ಪತ್ರವನ್ನು ಮುಚ್ಚಿಟ್ಟುಕೊಂಡಳು. ಚಹದ ಸಮಯದಲ್ಲಿ ಅವಳಿಂದ ಏನೂ ತಿನ್ನುವದಾಗಲಿಲ್ಲ. ಅಸ್ವಾಸ್ಥತೆಯ ನೆವ ಮಾಡಿಕೊಂಡು ಹೊರಗೆ ಉದ್ಯಾನದಲ್ಲಿ ಹೋದಳು. ಆ ಏಕಾಂತತೆಯಲ್ಲಿ ನಿಶ್ಚಿಂತಳಾಗಿ ಆ ರಹಸ್ಯ ಮಯ ಪತ್ರ ಓದಬೇಕಿತ್ತು ಅವಳಿಗೆ........ ಹ್ಞಂ! ಏನೆಂದಿರಿ ನೀವು? ''

ಕತೆ ಕೇಳುತ್ತಿದ್ದಂತೆಯೇ ನಾನು ಅರಿವಿಲ್ಲದೆಯೆ ಆಲುಗಾಡಿದ್ದೆ. ಅದಕ್ಕಾಗಿ ಅವರ ಪ್ರಶ್ನಕ್ಕೆ ಏನಾದರೂ ಹೇಳಲೇ ಬೇಕಿತ್ತು.

'ನಿಜಕ್ಕೂ ನೀವು ದೊಡ್ಡದಕ್ಕೆ ಕೈ ಹಾಕಿದ್ದಿರಿ. ಯಾರು ಬರೆದಿದ್ದಾರೆ, ಯಾರು ಇಟ್ಟಿದ್ದಾರೆ ಎಂದು ಅವಳು ಹುಡುಕಲು ಯತ್ನಿಸ ಬಹುದು-ಹೋಟೆಲ್ಲಿನ ಆಳನ್ನು ಕೇಳಬಹುದು. ಅಥವಾ ಆ ಪತ್ರವನ್ನು ತನ್ನ ತಾಯಿಗೆ ತೋರಿಸ ಬಹುದು. ಎಂದು ನಿಮಗನಿಸಲಿಲ್ಲವೇನು?"

"ಹೌದು ಹೀಗೆಲ್ಲ ಆಗುವದೂ ಸಾಧ್ಯವಿತ್ತು. ಇದು ನನಗೂ ಗೊತ್ತಿತ್ತು. ಆದರೆ ನೀವು ಆ ಹುಡುಗಿಯನ್ನು ನೋಡಿದ್ದರೆ ಹೀಗೆಂದೂ ಕೇಳುತ್ತಿರಲಿಲ್ಲ. ಕೆಲವರು ತುಂಬಾ ನಾಚಿಕೆಯ ಸ್ವಭಾವವುಳ್ಳವರಿರುತ್ತಾರೆ. ಪುರುಷರು ಅಂಥವರೊಡನೆ ಸಾಕಷ್ಟು ಸ್ವಾತಂತ್ರ್ಯ ವಹಿಸ ಬಹುದು. ಅವರು ಅದೆಲ್ಲ

ವನ್ನು ತುಟಿ ಎರಡು ಮಾಡದೆ ಸಹಿಸಿಕೊಳ್ಳುತ್ತಾರೆ. ಯಾಕಂದರೆ ಹೀಗೆಲ್ಲ ಆಯಿತು ಎಂದು ಎರಡನೆಯವರೆದುರು ಹೇಳಿ ಅದನ್ನು ಸಹಿಸಿಕೊಳ್ಳುವ ಶಕ್ತಿ ಅವರಲ್ಲಿರುವುದಿಲ್ಲ........" ಅಂತೂ ಅವಳು ಉದ್ಯಾನದಿಂದ ಮರಳಿದಾಗ ಅವಳಲ್ಲಿ ಪೂರ್ತಿ ಪರಿವರ್ತನೆಯಾಗಿತ್ತು. ಅವಳು ಮೊದಲಿನಂತಿರಲಿಲ್ಲ. ಮುಖದ ಮೇಲೆ ಉತ್ಸಾಹವಿತ್ತು. ನಡಿಗೆಯಲ್ಲಿ ಕುಣಿತವಿತ್ತು. ಎದೆಯಲ್ಲಿ ತಳಮಳವಿತ್ತು. ಒಂದು ವಿಚಿತ್ರ ತಳಮಳ. ಇದರಿಂದ ಅವಳು ಇನ್ನೂ ಚೆಲುವಾಗಿ ಕಂಡು ಬಂದಳು. ಕೆನ್ನೆಯ ಮೇಲೆ ಸಂಜೆಯ ಬಣ್ಣವೇರಿತ್ತು. ನನ್ನ ಯುಕ್ತಿಯ ಸಫಲತೆಯನ್ನು ಕಂಡು ನನಗಾದ ಆನಂದ ಇಷ್ಟೇ ಎಂದು ಹೇಳುವದು ಅಶಕ್ಯ. ಪ್ರಯತ್ನಿಸಿದರೂ ಕೂಡ ನನ್ನಿಂದ ಹೇಳುವುದಾಗುವದಿಲ್ಲ.

"ಈ ದಿನವೆಲ್ಲ ಅವಳು ಒಂದು ಅತೃಪ್ತಿಯಿಂದ ಅಲೆದಾಡುತ್ತಿದ್ದಳು. ಪತ್ರದ ರಹಸ್ಯ ಅವಳನ್ನು ಗೊಂದಲದಲ್ಲಿ ಹಾಕಿತ್ತು. ಆ ರಹಸ್ಯವನ್ನು ಒಡೆಯಲು ಅವಳು ಒಂದಾದ ನಂತರ ಮತ್ತೊಂದು ಕಿಟಕಿಯಿಂದ ಹೊರಗೆ ಇಣಕಿ ನೋಡುತ್ತಿದ್ದಳು. ಯಾರಾದರೂ ಬಂದು ಹೊರಗೆ ನಿಂತಿದ್ದಾರೇನೋ ಎಂಬಂತೆ. ನನ್ನ ಕಣ್ಣುಗಳೊಡನೆ ಕಣ್ಣು ಕೂಡಿದಾಗ ನಾನು ಕೆಳಗೆ ನೋಡುತ್ತಿದ್ದೆ. ಗುಟ್ಟು ಹೊರಬಿದ್ದೀತೆಂದು ನನಗೆ ಅಂಜಿಕೆ ಇತ್ತು. ಒಂದು ಕ್ಷಣ ಮಾತ್ರ ನಮ್ಮಿಬ್ಬರ ಕಣ್ಣು ಕೂಡಿದ್ದವು. ಆ ಒಂದು ಕ್ಷಣದಲ್ಲಿಯೇ ಅವಳ ಎದೆಯಲ್ಲಿ ಹೊತ್ತುತ್ತಿದ್ದ ಜ್ವಾಲಾಮುಖಿಯನ್ನು ಕಂಡು ಕೊಂಡೆ. ಬಾಳಿನ ಕಡೆ ಅವಳ ಆಶೆ ಹೊರಳುತ್ತಿರುವುದನ್ನು ಕಂಡು ನನಗೆ ಒಳ್ಳೆಯದೇ ಎನಿಸಿತ್ತು. ನಾನೂ ದಿನಾಲು ಸಂಜೆ ಪತ್ರ ಬರೆಯ ತೊಡಗಿದೆ. ಹಾಗೆ ಬರೆಯುವಾಗ ನನಗೂ ಆನಂದದ ಅನುಭವವಾಗುತ್ತಿತ್ತು. ದಿನಗಳೆದಂತೆ ಈ ಪತ್ರಗಳಲ್ಲಿ ಹರೆಯದ ಒಲವನ್ನೂ, ಕಾಲ್ಪನಿಕ ಅನುರಾಗವನ್ನೂ ವ್ಯಕ್ತ ಮಾಡುವದರಲ್ಲಿ ನಾನು ಸಿದ್ಧ ಹಸ್ತನಾದೆ. ಒಮ್ಮೊಮ್ಮೆ ಈ ಆಟದ ಕೊನೆ ಹೇಗಾಗಬಹುದು ಎಂಬ ಅಜ್ಞಾತ ಭಯ ನನ್ನನ್ನು ಪೀಡಿಸುತ್ತಿತ್ತು. ಆದರೆ ಕೇವಲ ಇದೇ ಒಂದು ಭಯಕ್ಕಾಗಿ ದೊರೆಯುತ್ತಿದ್ದ ವಿನೋದದಿಂದ ವಂಚಿತನಾಗಲು ನಾನು ಇಚ್ಛಿಸಲಿಲ್ಲ.

ಇೀಗ ಅವಳ ಅಂಗಾಂಗಗಳಲ್ಲಿ ಯೌವನ ಹೆಚ್ಚು ಒಡೆದು ಕಾಣುತ್ತಿತ್ತು. ಅವಳು ನಡೆಯುತ್ತಿದ್ದರೂ ಅದರಲ್ಲಿ ಒಂದು ತಾಳ ಬದ್ಧವಾದ ಕುಣಿತವಿದೆ

ಯೆಂದು ಭಾಸವಾಗುತ್ತಿತ್ತು. ರೋಮ ರೋಮಗಳಲ್ಲಿ ಅವಳಿಗಾಗಿ ವಿಚಿತ್ರ ಅನುರಾಗ ಎದ್ದು ನಿಲ್ಲುತ್ತಿತ್ತು. ಅವಳ ಕಣ್ಣು ಒಳನಟ್ಟಿದ್ದವು. ಸುತ್ತಲೂ ಕಪ್ಪು ಹಬ್ಬಿಕೊಂಡಿತ್ತು. ಬಹುಶಃ ಮರುದಿನ ಬೆಳಿಗ್ಗೆ ದೊರೆಯ ಬಹುದಾದ ಪತ್ರದ ಪ್ರತೀಕ್ಷೆಯಲ್ಲಿ ಅವಳು ರಾತ್ರಿಯೆಲ್ಲಾ ನಿದ್ದೆ ಇಲ್ಲದೆ ಕಳೆಯುತ್ತಿದ್ದಳೋ ಏನೋ! ತನ್ನ ಪ್ರೇಮಿ ಯಾರೆಂದು ಅವಳಿಗೆ ಗೊತ್ತಿರದಿದ್ದರೂ ತನಗೆ ಈ ರೀತಿಯಾಗಿ ಪ್ರೇಮ ಪತ್ರ ಬರೆಯುವವನು ಇಲ್ಲಿಯೇ ಸಮೀಪದಲ್ಲಿ ಎಲ್ಲಿಯೋ ಇರಬಹುದೆಂಬ ಅಚಲ ನಂಬಿಕೆ ಇತ್ತು ಅವಳಿಗೆ. ಅಂತೆಯೇ ಅವಳು ಬಟ್ಟೆ ತೊಡುವುದರಲ್ಲಿ ವಿಶೇಷ ಲಕ್ಷ್ಯ ಹಾಕತೊಡಗಿದಳು. ಕೂದಲಿ ನಲ್ಲಿದ್ದ ಮೊದಲಿನ ಅಸ್ತವ್ಯಸ್ತತೆ ಮಾಯವಾಯಿತು. ಒಟ್ಟಾರೆ ತಾನು ಚನ್ನಾಗಿ ಕಾಣಬೇಕೆಂಬ ಅವಳ ಬಯಕೆ ನೂರು ರೀತಿಯಿಂದ ಹೊರಹೊಮ್ಮಿ ಕಾಣುತ್ತಿದ್ದಿತು. ಅವಳ ಚಂಚಲತೆ, ಹರ್ಷ, ಉನ್ಮಾದಗಳನ್ನು ಕಂಡು ಆ ವೃದ್ಧೆಯರಲ್ಲಿಯೂ ಸಂದೇಹ ಮೂಡಿತು. ಅವರು ಒಬ್ಬರನ್ನೊಬ್ಬರು ಅರ್ಥ ಪೂರ್ಣ ದೃಷ್ಟಿಯಿಂದ ನೋಡಿ ಮುಗುಳು ನಗುತ್ತಿದ್ದರು.

"ಆದರೆ ಇದರ ಜೊತೆಗೇ ತನ್ನ ಪ್ರೇಮಿ ಯಾರು ಎಂದು ತಿಳಿಯುವ ಕುತೂಹಲ, ಆಶೆ ಅವಳಲ್ಲಿ ಬೆಳೆಯುತ್ತಲೇ ನಡೆಯಿತು. ಆಶೆದುಂಬಿದ ಕಣ್ಣು ಗಳಿಂದ ಅವಳು ನಾಲ್ಕೂ ಕಡೆ ನೋಡುತ್ತಿದ್ದಳು—ಹುಡುಕುತ್ತಿದ್ದಳು. ಹಾಗೆ ಹುಡುಕುವಾಗ ಒಮ್ಮೊಮ್ಮೆ ನನ್ನ ಕಡೆಗೂ ನೋಡುತ್ತಿದ್ದಳು. ನನ್ನ ಮೇಲೆ ಅವಳಿಗೆ ಸಂಶಯ ಬಂದಿರಬೇಕು? ಎಂಬ ವಿಚಾರ ಮೂಡಿತು. ಅವಳಿಗೆ ಬಂದಿತ್ತೊ ಇಲ್ಲವೊ–ನನಗಂತೂ ಹಾಗೆನಿಸಿತು. ಏನೇ ಇರಲಿ. ನನ್ನ ಗುಟ್ಟನ್ನು ಮಾತ್ರ ನಾನು ಸುರಕ್ಷಿತವಾಗಿಟ್ಟುಕೊಳ್ಳಬೇಕಿತ್ತು. ಅದಕ್ಕಾಗಿ ' ಅವನು ಕಡೆನೇವಿಯಾದಲ್ಲಿಲ್ಲವೆಂತಲೂ ಪ್ರತಿ ದಿನ ಹಡಗದಿಂದ ಅಲ್ಲಿಗೆ ಬರುತ್ತಾ ನೆಂತಲೂ ' ಒಂದು ಪತ್ರದಲ್ಲಿ ಬರೆದೆ. ಅಂದಿನಿಂದ ಅವಳು ನನ್ನ ಕಡೆ ನೋಡುವದು ಕಡಿಮೆಯಾಯಿತು. ಆದರೆ ಹಡಗ ಬರುವ ಗಂಟೆಯಾದ ಕೂಡಲೆ ಯಾವುದಾದರೂ ಒಂದ ನೆಪದಿಂದ ಕಿಟಕಿಯಲ್ಲಿ ಬಂದು ನಿಲ್ಲುತ್ತಿದ್ದಳು. ಅವಳ ನೋಟ ದೂರದಲ್ಲಿ ಕಾಣುವ ಹಡಗವನ್ನು ಕುತೂಹಲದಿಂದ ನಿರೀಕ್ಷಿಸುತ್ತಿತ್ತು........"

ಹೇಳುತ್ತಿದ್ದಂತೆಯೇ ಮತ್ತೆ ಅವರು ಸುಮ್ಮನಾದರು. ಆದರೆ ಈ ಸಲ

ನನ್ನಿಂದ ಸುಮ್ಮನಿರುವದಾಗಲಿಲ್ಲ. ನಾನು 'ಮುಂದೆ' ಎಂದೆ. ನಾನೂ ಅಷ್ಟು ತನ್ಮಯನಾಗಿ ಬಿಟ್ಟಿದ್ದೆ ಆ ಹುಡುಗಿಯ ವಿಷಯದಲ್ಲಿ.

ಅವರು ನನ್ನ ಕಡೆ ನೋಡಿದರು. ಅವರ ತುಟಿಯ ಮೇಲೆ ಮೆಲು ನಗೆಯೊಂದು ಸುಳಿದು ಮಾಯವಾಯಿತು. ಅವರು ಮತ್ತೆ ಮುಂದುವರಿಸಿದರು.

" ಆ ದಿನ ಮುಗಿಲಲ್ಲಿ ಅಲ್ಲೊಂದು ಇಲ್ಲೊಂದು ಮೋಡ ಕಾಣಿಸ ತೊಡಗಿದ್ದುವು. ಬೇರೇನೂ ಕೆಲಸವಿರದೆ ನಾನು ಅವಳನ್ನೇ ನಿರೀಕ್ಷಿಸುತ್ತ ಕುಳಿತಿದ್ದೆ. ದೂರದಲ್ಲಿ ಸ್ಟೀಮರ್ ಬರುವ ಸೂಚನೆಯಾಯಿತು. ಕಿವಿಗೆ ಬಿತ್ತೋ ಇಲ್ಲವೋ; ಹುಡುಗಿ ಹೊರಗೋಡಿ ಕಾಯುತ್ತ ನಿಂತಳು. ಆದರೆ ಆ ದಿನ ದಿನದಂತಿರಲಿಲ್ಲ. ಅಂದು ಒಂದು ವಿಶೇಷ ಘಟನೆ ಜರುಗಿತು. ಇಳಿಯುವ ಪ್ರವಾಸಿಕರ ನಡುವೆ ಒಬ್ಬ ಸುಂದರ ತರುಣ ಕಾಣಿಸಿಕೊಂಡ. ಬೇಕೆಂದೇನೂ ಅಲ್ಲ–ಸಹಜವಾಗಿಯೇ ಅವನು ಆ ಹುಡುಗಿಯ ಕಡೆ ನೋಡಿದ. ಎರಡೂ ನೋಟಗಳು ಒಂದಾದವು. ನಿರೀಕ್ಷಣೆಯಲ್ಲಿ ದಿನ ತಳ್ಳುತ್ತಿದ್ದ ಹುಡುಗಿಯ ತೆಳುವಾದ ತುಟಿಗಳ ಮೇಲೆ ಆನಂದದ ಅಲೆಯೊಂದು ಅಲೆದು ಮಾಯವಾಯಿತು. ಆ ತರುಣನನ್ನೆ ತನ್ನ ಪ್ರೇಮಿ ಎಂದು ತಿಳಿದು ಅವಳ ಕೆನ್ನೆ ಕೆಂಪೇರಿದುವು. ಕಣ್ಣು ಕೆಳಗಾದವು. ಆದರೆ ತಡೆಯದ ಆಶೆ ಯಿಂದ ಮತ್ತೆ ಮೇಲೇಳುತ್ತಿದ್ದುವು. ತರುಣ ಬೆಚ್ಚಿ ಬಿದ್ದ. ಹುಡುಗಿಯ ಕಾತರ ದುಂಬಿದ ಕಣ್ಣುಗಳ ಆಮಂತ್ರಣವನ್ನು ನಿರಾಕರಿಸುವದು ಅವನಿಂದಾಗಲಿಲ್ಲ. ಅವನು ಮೆಲ್ಲನೆ ಹೆಜ್ಜೆ ಮುಂದಿಟ್ಟ. ಸಹಜ–ನಾಚಿಕೆ ಅವಳಲ್ಲಿ ಒಡಮೂಡಿತು. ಅವಳು ಅಲ್ಲಿಂದ ಓಡಿದಳು. ಆದರೆ ಮನಸ್ಸು ಕೇಳಲಿಲ್ಲ. ನಿಂತಳು. ನಿಂತು ಹೊರಳಿ ನೋಡಿದಳು; ಮತ್ತೆ ಓಡಿದಳು; ಮತ್ತೆ ನೋಡಿದಳು. ಆಶೆ-ಅಂಜಿಕೆ ಗಳ ನಡುವೆ, ಬಯಕೆ-ನಾಚಿಕೆಗಳ ನಡುವೆ ನಡೆಯುತ್ತಿರುವ ಈ ಮುಗಿಯದ ಆಟದಲ್ಲಿ ಅಬಲೆಯಾದ ಹೆಣ್ಣು ಯಾವಾಗಲೂ ಸಬಲೆಯಾಗಿ ಕಾಣುವಳು. ಈ ಕಣ್ಣು ಮುಚ್ಚಾಲೆಯಾಟವನ್ನು ಕಂಡು ಅವನು ತತ್ತರಿಸಿದ. ಅವಳನ್ನು ಹಿಡಿಯಲು ಓಡಿದ. ಇನ್ನೇನು ಅವಳನ್ನು ಹಿಡಿಯಬೇಕು. ಅಷ್ಟರಲ್ಲಿಯೇ ಆ ವೃದ್ಧೆಯರಿಬ್ಬರೂ ಹೊರಗೆ ಬಂದರು. ಬೆದರಿದ ಜಿಂಕೆಯಂತೆ ಹುಡುಗಿ ಅವರ ಕಡೆ ಓಡಿದಳು. ಅವನು ಹತಾಶನಾಗಿ ಹಿಂದಿರುಗಿದ. ಕೈಗೆ ಬಂತೆಂದ

ತಿಳಿದುಕೊಂಡ ತುತ್ತು ಕೈಗೆ ಬರಲಿಲ್ಲ. ಆದರೂ ಅವನು ಕಣ್ಮರೆಯಾಗುವ ವರೆಗೆ ಅವರು ಒಬ್ಬರನ್ನೊಬ್ಬರು ನೋಡುತ್ತಲೇ ಇದ್ದರು......."

"ಈ ಘಟನೆ ನಾನು ಹೂಡಿದ ಆಟವನ್ನು ಮುಗಿಸಲು ಸೂಚನೆ ಕೊಟ್ಟಿತು. ಆದರೂ ಎದೆಯಲ್ಲಿ ಅಡಗಿದ್ದ ಆ ಸೆಳೆತವನ್ನು ತಡೆಯುವದು ನನ್ನಿಂದಾಗಲಿಲ್ಲ. ಫಲಾಫಲಗಳನ್ನು ದೈವದ ಮೇಲೆ ಬಿಟ್ಟು ಆ ಸಂಜೆ ಅವಳಿಗೊಂದು ದೀರ್ಘವಾದ ಪತ್ರ ಬರೆದೆ. ಆ ಪತ್ರ ಓದಿದ ನಂತರ ಅವನೇ ತನ್ನ ಪ್ರೇಮಿ ಎಂದು ಅವಳಿಗೆ ಖಚಿತವಾಗಿರಬೇಕು. ನಾನು ಹೂಡಿದ ನಾಟಕಕ್ಕೆ ಒಂದರ ಸ್ಥಳದಲ್ಲಿ ಎರಡು ಪಾತ್ರ ದೊರೆತದ್ದಕ್ಕಾಗಿ ನನಗೂ ಸಂತೋಷವಾಯಿತು.

ಆದರೆ ಎರಡನೆಯ ದಿನವೆ ನನ್ನ ನಾಟಕ ಮುಗಿಯುವದಾಗಿ ಕಂಡು ಬಂದಿತು. ಬೆಳಿಗ್ಗೆ ಎದ್ದಾಗ ಅವರು ಸಾಮಾನುಗಳನ್ನೆಲ್ಲ ಕೂಡಿಡುವ ಗೊಂದಲದಲ್ಲಿದ್ದರು. ಆ ಹುಡುಗಿಯ ಕಣ್ಣುಗಳು ತುಂಬಿ ಬಂದಿದ್ದವು. ಅವುಗಳಲ್ಲಿ ನಿರಾಶೆ ಮುಸುಕಿತ್ತು. ಕರಗದ ವೇದನೆ ಕೂಡಿ ನಿಂತಿತ್ತು. ನಿನ್ನೆಯ ಘಟನೆಯಿಂದ ಅವಳು ಹಿಗ್ಗ ಬಹುದೆಂದು ತಿಳಿದಿದ್ದೆ. ಈ ವೈಪರೀತ್ಯ ವನ್ನು ಕಂಡು ನನ್ನ ಎದೆಯಲ್ಲಿ ಹೇಗೋ ಅನ್ನಿಸಿತು. ಇಂದು ಮೊದಲ ಸಲ ನಾನು ಮೀಟಿದರೂ ನನ್ನ ವೀಣೆ ನುಡಿಯಲಾರದೆನ್ನಿಸಿತು. ಈ ವಿಚಿತ್ರ ಪರಿಸ್ಥಿತಿಯ ಬಗೆಗೆ ತಲೆ ಕೆದರಿಕೊಂಡೆ. ನೂರು ರೀತಿಯಿಂದ ವಿಚಾರ ಮಾಡಿದೆ. ಆದರೆ ಯಾವ ನಿರ್ಧಾರವೂ ಆಗಲಿಲ್ಲ. ಪರಿಸ್ಥಿತಿ ಒದಗಿಸಿದ ಈ ಇಕ್ಕಟ್ಟ ತಪ್ಪಿಸಲು, ಜೊತೆಗೆ ಕೊರಗಿನಿಂದ ಭಾರವಾದ ಅವಳ ನೋಟದಿಂದ ಉಳಿಯಲು ನಾನು ದಿನವೆಲ್ಲ ಹೊರಗೇ ಅಲೆದಾಡಿದೆ. ಸಂಜೆ ಮರಳಿದಾಗ ಅವರ ಕೋಣೆ ಬರಿದಾಗಿತ್ತು. ಊಟದ ಸಮಯದಲ್ಲಿ ನೋಡಿದೆ. ಅವರಿಗಾಗಿ ಊಟದ ತಟ್ಟೆ ಹಾಕಿರಲಿಲ್ಲ. ಅವರು ಹೊರಟು ಹೋಗಿದ್ದರು. ತಮ್ಮೆದುರು ಜರುಗಿದ ಆದೊಂದು ಘಟನೆಯಿಂದ ಆ ವೃದ್ಧೆಯರಿಬ್ಬರೂ! ಪರಿಸ್ಥಿತಿಯ ಗಂಭೀರತೆಯನ್ನು ಕಂಡುಕೊಂಡಿದ್ದರೇನೊ! ತಮಗೆ ಜೀವನದಲ್ಲಿ ದೊರೆತ ಅನುಭವದಿಂದ ಸಮಯ ಕೈ ಮೀರಿ ಹೋಗುವದಕ್ಕಿಂತ ಮುಂಚಿತವಾಗಿಯೇ ಅಲ್ಲಿಂದ ಹೋಗುವುದು ಹಿತವೆನ್ನಿಸಿರಬೇಕು ಅವರಿಗೆ. ತನ್ನ ಪ್ರೇಮಿ ಯೊಡನೆ ಎರಡು ಮಾತನಾಡಲು, ನಿರೋಪ ತೆಗೆದು ಕೊಳ್ಳಲು ಕೂಡ ಆ ಹುಡುಗಿಗೆ ಸಮಯ ಒದಗಿ ಬರಲಿಲ್ಲ. ಇನ್ನೊಂದು ದಿನ, ಇನ್ನೊಂದು

ಗಂಟೆ ಕೂಡ ತನಗೆ ಎಷ್ಟು ಬೆಲೆಯುಳ್ಳದ್ದೆಂದು ಅವಳು ಯಾರಿಗೆ, ಎಂತು ಹೇಳಬೇಕು! ಸುಂದರ ಸ್ವಪ್ನದ ಸುವರ್ಣಮಯ ದೃಶ್ಯ ಪೂರ್ತಿಯಾಗುವ ದಕ್ಕಿಂತ ಮುಂಚಿತವಾಗಿಯೇ ಅವಳನ್ನು ಅವರು ನಿದ್ದೆಯಿಂದ ಎಬ್ಬಿಸಿದ್ದರು. ಕೇವಲ ವಿನೋದಕ್ಕೆಂದು ಹೂಡಿದ ನನ್ನ ನಾಟಕದ ಕೊನೆ ಹೀಗಾಗ ಬಹುದೆಂದು ನಾನು ಭಾವಿಸಿರಲಿಲ್ಲ. ನಿರ್ಬಲ ಕೋಪ, ತುಂಬಿದ ವೇದನೆ, ಕರಗದ ನಿರಾಶೆಗಳಿಂದ ಕೂಡಿದ ಅವಳ ನೋಟ ಇನ್ನೂ ನನ್ನ ಕಣ್ಮುಂದೆ ಕಟ್ಟಿದೆ. ಮುಂಬರುವ ವರ್ಷಗಳಿಗಾಗಿ ಅವಳ ಜೀವನದಲ್ಲಿ ನಾನು ಹಬ್ಬಿಸಿದ ನಿರಾಶೆಯ ಛಾಯೆಯನ್ನು ಕುರಿತು ನಾನು ಇನ್ನೂ ಯೋಚಿಸುತ್ತಿದ್ದೇನೆ. ನಾನು ಮಾಡಿದ ಅಪರಾಧ ಎದುರು ಬಂದು ನಿಲ್ಲುತ್ತದೆ. ಆಗ ನನ್ನನ್ನು ನಾನೇ ತಿರಸ್ಕರಿಸಿಕೊಳ್ಳುತ್ತೇನೆ ............"

ಅವರು ಕತೆ ಮುಗಿಸಿ ಒಂದು ದೀರ್ಘವಾದ ಉಸಿರೆಳೆದರು. ಆಗಾಗಲೇ ಸಾಕಷ್ಟು ಕತ್ತಲಾಗಿತ್ತು. ಮೂಡಣದಲ್ಲಿ ಮೋಡಗಳ ಮರೆಯಿಂದ ಚಂದಿರ ಇಣುಕತೊಡಗಿದ್ದ. ಸ್ವಲ್ಪ ಹೊತ್ತು ಸುಮ್ಮನಿದ್ದು ಅವರು ಮೆಲ್ಲನೆ ಕೇಳಿದರು.

'ಹೇಳಿರಿ. ಘಟನೆ ಹೇಗಿದೆ. ಒಂದು ಒಳ್ಳೇ ಕತೆಯಾಗಲು ಇದರಲ್ಲಿ ಸಾಕಷ್ಟು ವಸ್ತು ಅಡಗಿಲ್ಲವೆ?'

"ನಿಸ್ಸಂದೇಹವಾಗಿ. ನನಗಂತೂ ಇದು ತುಂಬಾ ಬೆಲೆಯುಳ್ಳದ್ದಾಗಿ ತೋರುತ್ತದೆ" ಎಂದು ನಾನು ಹೇಳಿದೆ. 'ಆದರೆ ಇದರಿಂದ ಒಂದು ಕತೆ ಹೆಣೆಯುವದು ಕಠಿಣ. ಯಾಕೆಂದರೆ ಇದು ಬರೀ ಭೂಮಿಕೆ ಅಷ್ಟೆ. ಮತ್ತೊಬ್ಬರ ಜೀವನದ ಹಾದಿಯಲ್ಲಿ ಈರೀತಿ ಗೊತ್ತು ಗುರಿ ಇಲ್ಲದೆಯೆ ನಡೆಯುವದು ಭೂಮಿಕೆಯಷ್ಟೇ ಅಲ್ಲದೆ ಮತ್ತೇನಾಗ ಬಹುದು. ಕತೆಯಾಗ ಬೇಕಾದರೆ ಅದಕ್ಕೊಂದು ಕೊನೆ ಬೇಕು.'

"ಓ! ನೀವನ್ನುವದೂ ನಿಜ. ಆ ಹುಡುಗಿಯ ಬಗೆಗೆ, ಅವಳ ಮನೆಯ ಬಗೆಗೆ, ದಿನ ಬೆಳಗಿದರೆ ಅವಳು ಬಾಳುವ ಬಾಳಿನ ಬಗೆಗೆ, ತಿಳಿಯುವ ಕುತೂಹಲವಿರಬೇಕು. ಅವಳ............"

"ಇಲ್ಲ. ನಾನು ಅದನ್ನು ಯೋಚಿಸುತ್ತಿಲ್ಲ."........ ನಾನು ನಡುವೆಯೇ ಬಾಯಿ ಹಾಕಿದೆ. 'ಆ ಹುಡುಗಿಯಲ್ಲಿ ನನಗಾವ ಆಸಕ್ತಿಯೂ ಇಲ್ಲ. ಹರೆಯದ ಹುಡುಗಿಯರ ಕಲ್ಪನೆಗಳೆಲ್ಲವೂ ಎಷ್ಟೇ ವರ್ಣರಂಜಿತವಿರಲಿ—ಒಂದೇ

ಮಾದರಿಯವಿರುತ್ತವೆ. ಅಂತೆಯೇ ಅವುಗಳಿಗಾಗಿ ನನಗೆ ಆಸಕ್ತಿ ಇಲ್ಲ. ನಿಮ್ಮ ಕತೆಯ ಹುಡುಗಿಯೂ ಉಳಿದ ಹುಡುಗಿಯರಂತೆ ಯಾವನಾದರೂ ಯೋಗ್ಯನಾದವನೊಡನೆ ಮದುವೆಯಾಗಬಹುದು. ಆಗ ಅವಳಿಗೆ ಈ ಘಟನೆ ಒಂದು ರೋಮಾಂಚಕಾರಿ ನೆನಪು ಅಷ್ಟೆ. ಅಲ್ಲ........ ನಾನು ಅವಳ ಬಗ್ಗೆ ಯೋಚಿಸುತ್ತಿಲ್ಲ."

'ಆಶ್ಚರ್ಯ! ಆ ತರುಣನಲ್ಲಿ ನೀವೇನು ಕಂಡಿರೋ ನನಗೆ ತಿಳಿಯದಾಗಿದೆ. ಈ ಪ್ರಕಾರದ ರೋಮಾಂಚಕ ಅನುಭವಗಳನ್ನು ಪ್ರತಿಯೊಬ್ಬನೂ ತನ್ನ ತಾರುಣ್ಯದಲ್ಲಿ ಪಡೆಯುತ್ತಾನೆ. ಆದಕ್ಕಾರೂ ಅಷ್ಟೊಂದು ಲಕ್ಷ್ಯ ಕೊಡುವದಿಲ್ಲ. ಲಕ್ಷ್ಯದಲ್ಲಿಡಬಹುದಾದ ಒಂದೆರಡು ರಸನಿಮಿಷಗಳು ಸಮಯದ ಹೊದಿಕೆಯಲ್ಲಿ ಅಡಗಿ ಮರೆಯಾಗಿ ಬಿಡುತ್ತವೆ. ಮುಂದೆ ಮುದುಕರಾದಾಗ ಮಾತ್ರ ತಾರುಣ್ಯದ ಆ ರಸನಿಮಿಷಗಳು ನೆನಪಾಗುತ್ತವೆ. ಆಗ ಅದರ ಬೆಲೆ ಏನು ಎಂಬುದನ್ನು ಕಂಡುಕೊಳ್ಳುತ್ತೇವೆ.'

'ಕ್ಷಮಿಸಿ. ನಾನು ಆ ತರುಣನ ಬಗ್ಗೆಯೂ ಯೋಚಿಸುತ್ತಿರಲಿಲ್ಲ.'

'ಅಂದರೆ........' ಅವರು ಕ್ಷಣಕಾಲ ತಡೆದರು–'ನೀವು ಇದನ್ನು ಹೇಗೆ ಮುಗಿಸಬೇಕೆನ್ನುವಿರಿ?'

ನಾನು ಹೇಳಿದೆ:—

'ಕೊನೆಯಲ್ಲಿ, ಪತ್ರ ಬರೆಯುತ್ತಿದ್ದ ಆ ವೃದ್ಧರ ಕತೆಯನ್ನು ಹೇಳಬೇಕಾಗಿದೆ ನನಗೆ. ಯಾವುದೇ ವ್ಯಕ್ತಿ, ಎಷ್ಟೇ ವಯಸ್ಸಿರಲಿ, ಸರಿಯಾದ ಬೆಲೆ ತೆತ್ತದೆ ಇಂಥ ಪ್ರೇಮ ಪತ್ರಗಳನ್ನು ಬರೆಯ ಬಹುದೆಂದು ನನಗನಿಸುವದಿಲ್ಲ. ಅವರು ವಿನೋದಕ್ಕಾಗಿ ಎಂದು ಹೂಡಿದ ಆಟದಲ್ಲಿ ತಾವೇ ಪಾತ್ರಧಾರಿಗಳಾದರು. ಆಟಕ್ಕಾಗಿ ಎಂದು ಹರಡಿದ ಬಲೆಯಲ್ಲಿ ತಾವೂ ಸಿಕ್ಕಿಬಿದ್ದರು. ನಿಷ್ಕಾಮ ಭಾವದಿಂದ ನೋಡುತ್ತಿದ್ದ ಆ ಸೌಂದರ್ಯದ ಕಡೆಗೆ ಅಕಲ್ಪಿತವಾದ ರೀತಿಯಿಂದ ಬಾಗಿದರು. ಈಗ ಎಲ್ಲವೂ ಕೈಯಿಂದ ಜಾರಿದಾಗ ಆ ಆಟಕ್ಕಾಗಿ ಕೆರಳುತ್ತಿದ್ದಾರೆ; ಆ ಗೊಂಬೆಗಾಗಿ ನರಳುತ್ತಿದ್ದಾರೆ. ಒಲುಮೆಯ ಜಗತ್ತಿನಲ್ಲಿ ವಯಸ್ಸಿನ ಅಂತರವಿಲ್ಲ. ವ್ಯಕ್ತಿ ಪ್ರೌಢನಿರಲಿ, ಇಲ್ಲವೆ ಅಪರಿಪಕ್ವ ಯುವಕನಿರಲಿ, ಅವರಿಬ್ಬರ ಭಾವನೆಗಳು ಒಂದೇ! ಭಾವನೆಗಳಿಗೆ ವಯಸ್ಸಿಲ್ಲ.

ಅವುಗಳಲ್ಲಿ ಯಾವ ಭೇದವೂ ಇರುವದಿಲ್ಲ. ಆ ತಳಮಳ, ಆ ತಿಕ್ಕಾಟ, ಅವರಿಬ್ಬರ ಎದೆಗಳಲ್ಲಿಯೂ ಹುಟ್ಟುತ್ತದೆ. ಈ ಕತೆಯ ನಾಯಕನಿಗೂ ಕೂಡ, ತನ್ನ ಆಟದ ಕೊನೆಯನ್ನು ಕಂಡು ತರುಣ-ಪ್ರಣಯಿಯಂತೆ ಎದೆಯ ಆಳದಲ್ಲಿ ವೇದನೆಯ ಅರಿವಾಗುತ್ತಿರಬಹುದು! ಆಶೆ ನಿರಾಶೆಗಳ ಉಯ್ಯಾಲೆಯಲ್ಲಿ ಅವನು ಜೀಕುತ್ತಿರಬಹುದು! ಒಂದೇ ಒಂದು ಸಲ ಮತ್ತೊಮ್ಮೆ ಆ ಹುಡುಗಿಯನ್ನು ನೋಡುವ ಆಶೆ ಅವನಲ್ಲಿದ್ದಿರಬಹುದು! ಆದರೆ ಅವಳನ್ನು ಹಿಂಬಾಲಿಸಿ ನೋಡುವ ಸಾಹಸ ಮಾತ್ರ ಅವನಲ್ಲಿಲ್ಲ. ಅದಕ್ಕಾಗಿ ಅವಳನ್ನು ಕಾಣುವ ಆಶೆಯಿಂದ ದೈವದ ಮೇಲೆ ಭಾರ ಹಾಕಿ, ಕೇವಲ ದೈವ ನಿರ್ದಯಿ ಎಂದು ಕಂಡು ಕೊಳ್ಳಲು ಅವನು ಇಲ್ಲಿಗೆ ಬರಲೇ ಬೇಕು........! ನೀವು ಹೇಳಿದ ಕತೆಯನ್ನು ನಾನು ಹೀಗೆ ಮುಗಿಸಬೇಕೆನ್ನುತ್ತೇನೆ. ಇದು.......'

'ಇಲ್ಲ. ಹೀಗೆಂದಿಗೂ ಇಲ್ಲ—'

ನಾನು ಬೆಚ್ಚಿದೆ. ದನಿ ಕಠೋರವಾಗಿದ್ದರೂ ಅದರಲ್ಲಿ ತಿಕ್ಕಾಟ ತುಂಬಿತ್ತು. ಇದಕ್ಕಿಂತ ಮೊದಲು ಆ ವೃದ್ಧರ ಭಾವನೆ ಈ ರೀತಿ ಕೆರಳಿದ್ದನ್ನು ನಾನು ಯಾವಾಗಲೂ ಕಂಡಿರಲಿಲ್ಲ. ಅರಿವಿಲ್ಲದೆಯೆ ನಾನು ಅವರ ಗಾಯದ ಮೇಲೆ ಕೈ ಇಟ್ಟಿದ್ದೆ. ಸಾವಕಾಶವಾಗಿ ನಾನು ಅವರ ಕಡೆ ನೋಡಿದೆ. 'ಪೈಪು' ಹೊತ್ತಿಸಲು ಕೊರೆದ ಕಡ್ಡಿಯ ಬೆಳಕಿನಲ್ಲಿ ಅವರ ನೊಂದ ಮುಖ ಕಣ್ಣಿಗೆ ಬಿತ್ತು. ನನಗೆ ತುಂಬಾ ಕೆಡುಕೆನ್ನಿಸಿತು. ಅದಕ್ಕಾಗಿ ನಾನೆಂದುದೆಲ್ಲ ವನ್ನೂ ಸರಿ ಪಡಿಸುವ ಪ್ರಯತ್ನ ಮಾಡತೊಡಗಿದೆ. ಆದರೆ ಅವರು ನಡೆಯ ಗೊಡಲಿಲ್ಲ. ಅಷ್ಟರಲ್ಲಿಯೇ ಅವರು ತಮ್ಮ ಭಾವನೆಗಳನ್ನು ಹಿಡಿತದಲ್ಲಿ ತಂದು ಕೊಂಡಿದ್ದರು. ನನ್ನ ಕಡೆ ನೋಡುತ್ತ ಮೆಲ್ಲನೆ ಹೇಳಿದರು—ಆ ಸ್ವರದಲ್ಲಿ ಶಾಂತತೆ ಇತ್ತು. ಕೊರಗಿನ ಛಾಯೆ ಇತ್ತು. ವಿಚಾರ ಮಗ್ನತೆಯ ವಿಕಲತೆಯಿತ್ತು.

'ನೀವೆನ್ನುವುದು ನಿಜವಿರಬೇಕು. ಅದೇ ಈ ಕತೆಯ ಸುಂದರ ಕೊನೆ ಯಾಗಬಹುದು........ಆದರೆ ವಯಸ್ಸಾದವರು, ತುಂಬ ಅನುಭವವಿದ್ದವರು ತಮ್ಮ ಗೆಲುವಿನ ಬಗೆಗೇ ಮಾತಾಡುತ್ತಾರೆ. ಸೋಲಿನ ಬಗೆಗೆ ಅವರು ಒಂದು ಮಾತೂ ಎತ್ತುವದಿಲ್ಲ. ಈ ಸೋಲು ತಮ್ಮನ್ನು ಹಾಸ್ಯಕ್ಕೆ ಗುರಿ

ಮಾಡ ಬಲ್ಲುದು ಎಂದು ತಿಳಿಯುತ್ತಾರೆ–ನಂಬುತ್ತಾರೆ. ಕಾಲಗತಿಯಲ್ಲಿ ಈ ಸೋಲು ಎನ್ನುವುದು ಅನಿವಾರ್ಯ ಎಂದು ಅವರು ಗಮನಿಸುವದಿಲ್ಲ....!'

ಅವರು ಮುಂದೇನೂ ಹೇಳಲಿಲ್ಲ. ಅವರ ಸ್ವರದಲ್ಲಿಯ ನಡುಕ ಅಡಗಿತ್ತು. ಕೈ ಕುಲುಕಿಸಿ ನಾವು ಅಗಲಿದೆವು. ಆ ಕತ್ತಲಲ್ಲಿ ಅವರು ಮೆಲ್ಲನೆ ನಡೆಯ ತೊಡಗಿದರು- ವಯಸ್ಸಿನಿಂದಾಗಿ ಅವರ ಹೆಜ್ಜೆ ನಡುಗುತ್ತಿದ್ದರೂ ಅವು ಭಾರವಾಗಿರಲಿಲ್ಲ.

('The flower Snared' ಎಂಬುದರ ಅನುವಾದ)



೫

# ಅಪರಿಚಿತ ಪ್ರೇಯಸಿ

—❖—

ಪ್ರಸಿದ್ಧ ಕಾದಂಬರಿಕಾರರಾದ ಶ್ರೀ. "ಆರ್–" ರವರು ಅದೇ ಬೇಸಿಗೆಯ ದಿನಗಳನ್ನು ಕಳೆದು ಹಿಂದಿರುಗುತ್ತಿದ್ದರು.

ಬೆಳಿಗ್ಗೆ ವಿಯೆನ್ನಾ ಸ್ಟೇಶನದಲ್ಲಿಳಿದು ದಿನ ಪತ್ರಿಕೆ ಕೊಂಡಾಗ ಅವರಿಗೆ ನೆನಪಾಯಿತು ಅದು ಅವರ ಜನ್ಮದಿನವೆಂದು. ಜೀವನದ ದೀರ್ಘಕಾಲ ನಾಲ್ವತ್ತೊಂದು ವರ್ಷ!! ಇದರಿಂದ ಅವರಿಗೆ ಪ್ರಸನ್ನತೆಯಾಗಲಿ, ದುಃಖ ವಾಗಲಿ ಆಗಲಿಲ್ಲ. ನಿರ್ವಿಕಾರತೆಯಿಂದ ಅವಸರವಾಗಿ ಮನೆ ಸೇರಿದರು. ಮೇಜಿನ ಮೇಲೆ ಪತ್ರಗಳ ಕಟ್ಟೊಂದು ಅವರ ಹಾದಿಯನ್ನೇ ಕಾಯುತ್ತಿತ್ತು. ಆರಾಮು ಕುರ್ಚಿಯ ಮೇಲೆ ಕುಳಿತು ಚಹದ ಗುಟುಕು ಸವಿಯುತ್ತ ಅವರು ಒಂದೊಂದೇ ಪತ್ರಗಳನ್ನು ತಿರುವ ತೊಡಗಿದರು. ಕೆಲವು ಹಳೆಯ ಮಾಸ ಪತ್ರಿಕೆ, ಕೆಲವು ಸಂಪಾದಕರ ನಮ್ರ ನಿವೇದನೆ; ಕೆಲವು ಪ್ರಕಟನಾಮಂದಿರ ಗಳ ವಿಜ್ಞಾಪನೆ; ಇನ್ನೂ ಏನೇನೋ ಆಕಸ್ಮಿಕವಾಗಿ ಅವರ ನೋಟ ಆ ಕಾಗದಗಳಲ್ಲೊಂದರ ಅಪರಿಚಿತ ಬರವಣಿಗೆಯ ಮೇಲೆ ಬಿತ್ತು. ಲವಲವಿಕೆ ಯಿಂದ ಅದನ್ನೆತ್ತಿಕೊಂಡರು. ಸುಮಾರು ಹದಿನಾರು ಪುಟಗಳಷ್ಟು ದೀರ್ಘ ಪತ್ರ! ಪತ್ರದ ಯಾವ ಮೂಲೆಯಲ್ಲಿಯೂ ಬರೆದವರ ಹೆಸರಾಗಲಿ, ವಿಳಾಸ ವಾಗಲಿ ಕಾಣಲೇ ಇಲ್ಲ. ಈ ಪತ್ರ ತನಗೇ ಬಂದುದೋ ಇಲ್ಲವೋ ಎಂಬ ಶಂಕೆ ಕೂಡ ಮೂಡಿತು. ಮತ್ತೊಮ್ಮೆ ಕವರು ನೋಡಿದರು. ದುಂಡಾಗಿ– ಬಿಡಿ ಬಿಡಿಯಾಗಿ ಬರೆಯಲ್ಪಟ್ಟಿತ್ತು ಅವರ ಹೆಸರು–ವಿಳಾಸ. ಏಕಾಗ್ರತೆಯಿಂದ ಅವರು ಓದಲು ಮೊದಲು ಮಾಡಿದರು:—

"........ರ ಸೇವೆಯಲ್ಲಿ—

ನೀವು ನನ್ನನ್ನು ಗುರುತಿಸಲಾರಿರಿ–" ಈ ಮೊದಲಿನ ವಾಕ್ಯದಿಂದಲೇ

ಅವರ ಕುತೂಹಲ ಕೆರಳಿತು. ಗಟ್ಟಿಯಾಗಿ ಉಸಿರಾಡಿಸದೆ ಅವರು ಮುಂದೆ ಸಾಗಿದರು.

"ನನ್ನ ಮಗು ನಿನ್ನೆ ತೀರಿತು. ಕಳೆದ ಎರಡು ದಿನಗಳಲ್ಲಿ ಅದರ ಎಳೆ ಜೀವವನ್ನುಳಿಸಲು ನಾನು ಮೃತ್ಯುವಿನೊಂದಿಗೆ ಸತತವಾಗಿ ಹೋರಾಡಿದೆ. ನಾಲ್ವತ್ತು ಗಂಟೆ ಮಗುವಿನ ಬಳಿಯಿಂದ ಏಳದೆ ಉಪಚಾರ ಮಾಡಿದೆ. ಮೂರನೆಯ ದಿನ—ನನ್ನ ದುರ್ದೈವ, ದಣುವಿನಿಂದ ಒಂದು ಕ್ಷಣ ಮಾತ್ರ ಕಣ್ಣು ಮುಚ್ಚಿದಾಗ ಮೃತ್ಯು ತನ್ನ ಕೆಲಸ ಸಾಧಿಸಿತ್ತು. ಸಾವು ನನ್ನ ಕಂದ ನನ್ನು ಎಳೆದೊಯ್ಯಿತು. ಇನ್ನೂ ನನ್ನ ಕಂದ ಹಾಸಿಗೆಯ ಮೇಲೆಯೇ ಮಲಗಿದೆ. ಅದೇ ಮುದ್ದಾದ ಮುಖ. ಆದರೆ ಆ ಮೋಹಕ ಕಣ್ಣುಗಳು ಮಾತ್ರ ಮುಚ್ಚಿಕೊಂಡಿವೆ. 'ಅದು ಸತ್ತಿಲ್ಲ; ನಿದ್ದೆ ಮಾಡುತ್ತಿದೆ; ಇಗ ಮತ್ತೆ ಕಣ್ದೆರೆಯಬಹುದು,........ಮತ್ತೆ ಅಮ್ಮಾ ಎಂದು ಕರೆಯಬಹುದು ಎನ್ನಿಸುತ್ತಿದೆ. ಆದರೆ ಇದೆಲ್ಲ ಮಾತೃಪ್ರೇಮದ ಭ್ರಮೆ ಎಂದು ಬಲ್ಲೆ. ನನ್ನ ಕಂದ ಇನ್ನು ಎಂದೂ ಬರಲಾರ—ನನ್ನ ಕರುಳಿನ ತುಣುಕು ನಿನ್ನೆಯೇ ಕತ್ತರಿಸಿ ಬಿತ್ತು. ಈ ಜಗತ್ತಿನಲ್ಲಿ ಈಗ ನನಗಾರೂ ಇಲ್ಲ—ನಿಮ್ಮ ಹೊರತಾಗಿ- ನೀವೇ ಈಗ ನನಗೆ. ನನ್ನ ಪರಿಚಯ ಕೂಡ ನಿಮಗಿರಲಿಕ್ಕಿಲ್ಲ—ಆದರೂ ನನ್ನ ಜೀವನದ ತುಂಬೆಲ್ಲ ನಾನು ನಿಮ್ಮನ್ನೇ ಪ್ರೀತಿಸಿದ್ದೇನೆ, ಎಂಬುದು ನಿಜ.

"ನನ್ನ ಮಗುವಿನ ಮಂಚದ ನಾಲ್ಕೂ ಕಾಲುಗಳ ಬಳಿ ನಾಲ್ಕು ಮೇಣ್ ಬತ್ತಿ ಉರಿಯ ತೊಡಗಿವೆ; ಐದನೆಯ ಬತ್ತಿಯನ್ನು ಹಚ್ಚಿ ನಾನು ನಿಮಗೆ ಈ ಪತ್ರ ಬರೆಯತೊಡಗಿದ್ದೇನೆ. ನನ್ನ ಎದೆಯಲ್ಲಿದ್ದ ವೇದನೆಯನ್ನು ಹೇಳಿಕೊಳ್ಳದೆ ಇರಲಾರೆ. ಈ ಭಯಾನಕ ಕ್ಷಣದಲ್ಲಿ ನನ್ನ ಕತೆ ಕೇಳಬೇಕಾರು—ನಿಮ್ಮ ಹೊರತಾಗಿ ? ನೀವೇ ನನಗೆ ಒಬ್ಬರು. ನಾನು ನಿಮಗೆ ಹೇಗೆ ಹೇಳಲಿ? ತಲೆ ಕಾವಿನಿಂದ ಸೀಳತೊಡಗಿದೆ. ಎದೆಯ ನರ ಹರಿಯ ತೊಡಗಿದೆ. ಮೈಯೆಲ್ಲ ಕಾದು ಕೆಂಡವಾಗಿದೆ ಕಾಳ್ಗಿಚ್ಚಿನಂತೆ ಇನ್‌ಫ್ಲುಎಂಜಾ ಇಲ್ಲಿ ಹರಡಿದೆ. ನಿನ್ನೆ ನನ್ನ ಮಗುವಿನ ಜೊತೆಗೆ ಹೋಗಿದ್ದರೆ........! ಕಣ್ಣು ಕತ್ತಲು ಗೂಡಿಸುತ್ತಿವೆ. ಈ ಪತ್ರ ಮುಗಿಯುವ ಬಗೆಗೂ ಸಂಶಯ ಮೂಡ ತೊಡಗಿದೆ. ಆದರೂ ಎಲ್ಲ ಶಕ್ತಿಯನ್ನು ಕೇಂದ್ರೀಕರಿಸಿ ಅದಕ್ಕಾಗಿ ಹೋರಾಡುತ್ತಿದ್ದೇನೆ.

''ಇಂದು ಜೀವನದ ಕೊನೆಯ ಮೆಟ್ಟಲಿನ ಮೇಲಿರುವಾಗ ನನ್ನದೆಲ್ಲವನ್ನೂ ನಿಮ್ಮಲ್ಲಿ ನಿವೇದಿಸತೊಡಗಿದ್ದೇನೆ. ನನ್ನ ಜೀವನದ ಗುಟ್ಟೆಲ್ಲವನ್ನೂ ಇಂದು ನಿಮ್ಮ ಮುಂದಿಡ ತೊಡಗಿದ್ದೇನೆ. ಇದೆಲ್ಲವನ್ನೂ ನೀವು ತಿಳಿಯುವದು ನಾನು ಸತ್ತ ಮೇಲೆ ಮಾತ್ರ. ಜ್ವರದಲ್ಲೇ ಕಣ್ಣು ಮುಚ್ಚಿದರೆ ಸರಿ. ಇಲ್ಲವಾದರೆ ಕಷ್ಟ ಪಟ್ಟು ಬರೆದದ್ದನ್ನೆಲ್ಲ ಚೂರುಚೂರು ಮಾಡ ಗಾಳಿಗೆ ತೂರಿ ಮೌನದಿಂದಿರುವೆ—ಇಷ್ಟು ದಿನದಂತೆ! ಆದರೆ ಎಂದಾದರೊಂದು ದಿನ ಪತ್ರ ನಿಮ್ಮ ಕೈಸೇರಿದರೆ ಇದೊಂದು ಒಬ್ಬ ಮೃತಳ ಆತ್ಮ ಕಥೆಯೆಂದು ತಿಳಿಯಬೇಕು. ಜೀವನದ ಅಂತಿಮ ಗಳಿಗೆಯವರೆಗೂ ನಿಮ್ಮವಳೇ ಆದ ಹೆಣ್ಣಿನ ಆತ್ಮ ಕಥೆ. ಅಂಜಬೇಡಿರಿ ನಾನು ನಿಮ್ಮಿಂದ ಏನೂ ಬೇಡುವದಿಲ್ಲ. ಪ್ರೇಮ, ದಯೆ, ಸಹಾನುಭೂತಿ ಯಾವುದೂ ನನಗೆ ಬೇಕಾಗಿಲ್ಲ. ಆದರೆ ಒಂದು ಪ್ರಾರ್ಥನೆ—ನನ್ನ ಶಬ್ದಗಳಲ್ಲಿ ವಿಶ್ವಾಸವಿಡಿರಿ. ನನ್ನ ಮಾತನ್ನು ನಂಬಿರಿ. ಕಳೆದುಕೊಂಡ ಕಂದನ ಬಳಿ ಕುಳಿತು ಯಾವ ತಾಯಿಯೂ ಸುಳ್ಳು ಹೇಳಲಾರಳು.

''ನಿಮ್ಮನ್ನು ನಾನು ಮೊದಲು ನೋಡಿದಂದಿನಿಂದಲೇ ನನ್ನ ಜೀವನ ಮೊದಲಾಯಿತು. ಆಗ ನಾನಿನ್ನೂ ಹದಿಮೂರು ವರ್ಷದ ಹುಡುಗಿ! ಯಾವ ಮನೆಯಲ್ಲಿ ಕುಳಿತು ಈ ಪತ್ರವನ್ನು ಓದುತ್ತಿರುವಿರೋ ಅದೇ ಮನೆಯಲ್ಲಿ ನಾನೂ ಇರುತ್ತಿದ್ದೆ; ನಿಮ್ಮ ಬ್ಲಾಕಿನ ಎದುರೇ ನನ್ನ ಮನೆಯ ಬಾಗಿಲು. ನೀವು ಮರೆತಿರಬಹುದು. ಒಬ್ಬ ಅಕೌಂಟಂಟನ ವಿಧವೆ ಹೆಂಡತಿ ತೆಳ್ಳಗಿದ್ದ ಅವಳ ಮಗಳು—ನೆನಪಿದೆಯೆ ನಿಮಗೆ? ನಾವು ಬಡವರು. ನಮ್ಮ ಹೆಸರು ಕೂಡ ನಿಮಗೆ ಗೊತ್ತಿರಲಿಕ್ಕಿಲ್ಲ. ಬಡವರ ಹೆಸರಿಗಾಗಿ ಯಾರು ಹಾತೊರೆಯುತ್ತಾರೆ. ಮೇಲಾಗಿ ಇದು ೧೫–೧೬ ವರ್ಷಗಳ ಹಿಂದಿನ ಮಾತು. ನಿಮಗೆ ನೆನಪಿರುವುದು ಶಕ್ಯವೇ ಇಲ್ಲ. ಆದರೆ ನಾನು ಮಾತ್ರ ಯಾವುದನ್ನೂ ಮರೆತಿಲ್ಲ. ಇನ್ನೂ ನೆನಪಿದೆ; ಮೊಟ್ಟಮೊದಲು ಹೆಸರು ಕೇಳಿದ್ದು—ನಿಮ್ಮನ್ನು ಮೊದಲನೆಯ ಸಲ ನೋಡಿದ್ದು ಇನ್ನೂ ಮಾಸದೆ ಉಳಿದಿವೆ. ಬೇಸರಿಯ ಬೇಡಿರಿ. ನಿಧಾನವಾಗಿ ನಾನು ಹೇಳುವದನ್ನೆಲ್ಲ ಕೇಳಿರಿ. ನಾನು ನನ್ನ ಬಾಳೆಲ್ಲಾ ನಿಮ್ಮನ್ನು ಬೇಸರಿಯದೆ ಪ್ರೀತಿಸಿದ್ದೇನೆ.''

''ನೀವು ಬರುವದಕ್ಕಿಂತ ಮುಂಚೆ ನಿಮ್ಮ ಆ ಮನೆಯಲ್ಲಿದ್ದ ಜನರು

ತೀರ ಅಸಭ್ಯರು. ಅವರ ನಡೆ, ನುಡಿ ಎಲ್ಲವೂ ಹೊಲಸು ಅವರು ಕುಣಿಯುವದೇನು, ಕೇಕೆ ಹಾಕುವದೇನು? ನೆರೆಹೊರೆಯ ಜನರೆಲ್ಲರಿಗೂ ಬೇಸರವಾಗಿತ್ತು. ಅವರ ಮಕ್ಕಳು ಕೂಡ ದಾರಿಯಲ್ಲಿ ಕಂಡಾಗ ನನ್ನೊಡನೆ ಜಗಳಕ್ಕೇ ಬರುತ್ತಿದ್ದುವು. ಅವರನ್ನು ಕಂಡರೆ ನನಗೆ ಏನೋ ಒಂದು ತರದ ಹೆದರಿಕೆಯಾಗುತ್ತಿತ್ತು. ಯಾವುದೋ ಕಾರಣದಿಂದ ಅವರು ಮನೆ ಬಿಟ್ಟರು. ಯಾರೋ ಒಬ್ಬ ಪ್ರಸಿದ್ಧ ಲೇಖಕರು ಅಲ್ಲಿ ಬರುವದಾಗಿ ಸುದ್ದಿ ಹಬ್ಬಿತು. ನಿಮ್ಮ ಬಗೆಗೆ ನಾನು ಕೇಳಿದ್ದು ಅದೇ ಮೊದಲು ಬಾರಿ.

"ಅದಾದ ನಾಲ್ಕೈದು ದಿನಗಳ ನಂತರ ಮನೆಯ ಸ್ವಚ್ಛತೆ ನಡೆಯಿತು. ನೀವು ಇಂದೊ ನಾಳೆಯೊ ಬರುವದಾಗಿ ಕೇಳಿದ್ದೆ. ಮನೆಯನ್ನು ಸಿಂಗರಿಸುವಾಗ ನಾನು ನಿಮ್ಮನ್ನು ನೋಡುವುದಾಗಲಿಲ್ಲ. ಅದೆಲ್ಲವನ್ನೂ ನಿಮ್ಮ ಮುದುಕ ಮನುಷ್ಯನೇ ಮಾಡುತ್ತಿದ್ದ. ಅವನು ಮಾಡುತ್ತಿದ್ದ ರೀತಿ-ಕೆಲಸದಲ್ಲಿ ಅವನು ತೋರುತ್ತಿದ್ದ ಆತ್ಮೀಯತೆ ನಮ್ಮೆಲ್ಲರನ್ನೂ ಬೆರಗು ಗೊಳಿಸಿದ್ದುವು. ನಿಮ್ಮ ಹೆಸರು ಉಚ್ಚರಿಸುವಾಗ ಅವನು ತೋರುವ ನಯವೆಷ್ಟು-ಭಕ್ತಿಯೆಷ್ಟು! ಅಂಥ ಆಳನ್ನು ಕಾಣುವುದೇ ದುರ್ಲಭ. ಅವನೆಂದರೆ ನನಗೆ ಪ್ರೀತಿ; ಜೊತೆಗೆ ಈರ್ಷೆ ಕೂಡ. ನನ್ನನ್ನು ವಂಚಿಸಿದ ವಿಧಿ ಅವನಿಗೆ ನಿಮ್ಮ ಜೊತೆಗಿದ್ದು ಸೇವೆ ಮಾಡುವ ಸೌಭಾಗ್ಯ ಒದಗಿಸಿ ಕೊಟ್ಟಿತ್ತು.

"ಇಂಥ ಸಣ್ಣ ಸಣ್ಣ ಮಾತುಗಳನ್ನೆಲ್ಲ ಏಕೆ ತಿಳಿಸುತ್ತಿರುವೆ, ಗೊತ್ತೇ? ನಾನೊಂದು ಸಂಕೋಚಶೀಲಳಾದ ನಾಚಿಕೆಯ ಸ್ವಭಾವದ ಹುಡುಗಿಯಾಗಿರುವಾಗಲೇ ನಿಮ್ಮ ಪ್ರಭಾವ ಹೇಗೆ ಸಾವಕಾಶವಾಗಿ ನನ್ನ ಮೇಲೆ ಆಗುತ್ತ ಬಂತೆಂಬುದು ನಿಮಗೆ ತಿಳಿಯಲೆಂದು. ನೀವು ಬರುವವರೆಗೆ ಎಲ್ಲರಿಗೂ ನಿಮ್ಮ ಬಗೆಗೆ ಕುತೂಹಲ......... ಉತ್ಸುಕತೆ; ಎಲ್ಲರೂ ನಿಮ್ಮನ್ನೆ ಪ್ರತೀಕ್ಷಿಸುತ್ತಿದ್ದರು. ನನ್ನ ನಿರೀಕ್ಷಣೆಯಂತೂ ಸೀಮೆ ಮೀರಿತ್ತು. ನಿಮ್ಮ ಸಾಮಾನುಗಳೆಲ್ಲವೂ ಬರತೊಡಗಿದವು. ನಾನು ಬಾಗಿಲಲ್ಲಿ ನಿಂತು ಎಲ್ಲವನ್ನೂ ನೋಡುತ್ತಿದ್ದೆ. ಕೊನೆಗೆ ನಿಮ್ಮ ಪುಸ್ತಕಗಳ ಹೊರೆಯೂ ಬಂದಿತು ಅಬ್ಬಾ! ಎಷ್ಟೊಂದು ಪುಸ್ತಕಗಳು! ಹೊರಗೆ ಇಟ್ಟು ಧೂಳ ಜಾಡಿಸುತ್ತಿರುವಾಗ ನಾನು ಸಾವಕಾಶ ಅವುಗಳ ಸಮೀಪ ಹೋದೆ. ನಿಮ್ಮ ಮನುಷ್ಯ ಬೆದರಿಸಲೂ ಇಲ್ಲ. ಕರೆಯಲೂ ಇಲ್ಲ. ಅಲ್ಲಿಯೇ ನಿಂತು ಒಂದೊಂದಾಗಿ ಪುಸ್ತಕಗಳ ಹೆಸರು

ಓದಿದೆ. ಎಷ್ಟೊಂದು ಭಾಷೆಗಳ ಪುಸ್ತಕ! ಗಂಟೆಗಳವರೆಗೆ ನೋಡುತ್ತಿದ್ದೆ. ಆದರೆ ಅಮ್ಮ ಕರೆದಳು. ಒಳಗೆ ಓಡಿದೆ.

"ನಿಮ್ಮನ್ನೆಂದೂ ನೋಡಿರದಿದ್ದರೂ ಕೂಡ ನನ್ನ ಅಂದಿನ ಸಾಯಂಕಾಲವೆಲ್ಲವೂ ನಿಮ್ಮ ವಿಚಾರದಲ್ಲಿಯೇ ಕಳೆಯಿತು. ನನ್ನಲ್ಲಿಯೂ ನಾಲ್ಕೆಂಟು ಪುಸ್ತಕಗಳಿದ್ದವು. ನನ್ನೆಲ್ಲ ಉಳಿದ ಪುಸ್ತಕಗಳಿಗಿಂತ ಅವನ್ನು ಹೆಚ್ಚಿನ ಪ್ರೀತಿಯಿಂದ ಜೋಪಾನ ಮಾಡುತ್ತಿದ್ದೆ. ಎಷ್ಟೋ ಸಲ ಅವನ್ನೇ ಮತ್ತೆ ಮತ್ತೆ ಓದುತ್ತಿದ್ದೆ. ಇಷ್ಟು ಭಾಷೆ-ಇಷ್ಟು ಜ್ಞಾನ ಬಲ್ಲವರಾದ ನೀವು ಹೇಗೆ ಇರಬಹುದೆಂಬುದೇ ನನ್ನ ಯೋಚನೆ. ಆ ಪುಸ್ತಕಗಳೆಲ್ಲವೂ ಒಂದು ವಿಚಿತ್ರ ವಾತಾವರಣವನ್ನು ಹುಟ್ಟಿಸಿದವು. ನಾನು ನನ್ನಲ್ಲಿಯೇ ನಿಮ್ಮನ್ನು ಚಿತ್ರಿಸತೊಡಗಿದೆ. ಮುದುಕರಿರಬಹುದು-ಕಣ್ಣಿಗೆ ಕನ್ನಡಕ-ತಲೆತುಂಬ ಬಿಳೀ ಕೂದಲು-ನಮ್ಮ ಭೂಗೋಲ ಮಾಸ್ತರರಂತೆ-. ಆದರೆ ಅದೇಕೋ ನನ್ನ ಮನಸ್ಸು ಆ ಚಿತ್ರವನ್ನು ಕಲ್ಪಿಸಿದರೂ ಗ್ರಹಿಸದೆ, ನೀವು ಸುಂದರರಿರಬೇಕೆಂದು ಗ್ರಹಿಸಿತು. ಅದೇ ರಾತ್ರಿ ನಾನು ಗ್ರಹಿಸಿದಂತೇ ನಿಮ್ಮನ್ನು ಕನಸಿನಲ್ಲಿ ಕಂಡೆ.

"ಎರಡನೆಯ ದಿನ ನೀವು ಬಂದಿರಿ. ನಿಮ್ಮ ನಿರೀಕ್ಷಣೆಯಲ್ಲಿಯೇ ಇದ್ದರೂ ನಿಮ್ಮನ್ನು ನೋಡುವದಾಗಲಿಲ್ಲ. ನನ್ನ ಆಶೆ ಬಲವಾಯಿತು. ಕೊನೆಗೆ ಮೂರನೆಯ ದಿನ ನಿಮ್ಮನ್ನು ಕಂಡೆ. ಚಕಿತಳಾದೆ. ನನ್ನ ಕಲ್ಪನೆಗೂ ನಿಮಗೂ ಎಷ್ಟು ವ್ಯತ್ಯಾಸ! ಕನ್ನಡಕ ಧರಿಸಿ, ನಡಗುತ್ತ ಬರುವ ವಯಸ್ಸಾದ ಸಜ್ಜನರೆಲ್ಲಿ? ಭೂಮಿ ಆಕಾಶಗಳ ಅಂತರ! ನನ್ನ ಗ್ರಹಿಕೆಯೇ ಸರಿಯಾಗಿತ್ತು! ಆ ಕ್ಷಣದಲ್ಲಿಯೇ ಒಮ್ಮೆ ನಿಮ್ಮ ಸುಂದರ ಮುಖ ನೋಡಿದೆ. ಆಗ ನನಗೆ ಹೊಳೆಯಿತು—ಜನವೇಕೆ ನಿಮ್ಮನ್ನು ಕಂಡು ಆಶ್ಚರ್ಯ ಪಡುತ್ತಾರೆಂದು. ನಿಮ್ಮಲ್ಲಿ ದ್ವಿಮುಖದ ವ್ಯಕ್ತಿತ್ವವಿತ್ತು. ಭಾವುಕರಾಗಿ, ಸ್ವಚ್ಛಂದರಾಗಿ ಹುಡುಗರೊಡನೆ ಹುಡುಗರಾಗಿ ಆಡುವ ಮುಖ ಒಂದು ಕಡೆ;—ಸಭ್ಯತೆ, ಗಂಭೀರತೆ, ಸುಸಂಸ್ಕೃತತೆ, ಅಧ್ಯಯನಶೀಲತೆ—ಎರಡನೆಯ ಕಡೆ. ನಿಮ್ಮ ಈ ದ್ವಿಮುಖ ಜೀವನ ಮಾರ್ಗ ನಿಮ್ಮ ಸಂಪರ್ಕದಲ್ಲಿ ಬರುವವರೆಲ್ಲರಿಗೂ ತಿಳಿಯುವಂತಿತ್ತು—ನನಗಂತೂ ಆಗ ಹಾಗೆ ಹೊಳೆಯಿತು.

ನನ್ನ ಗ್ರಹಿಕೆಯಲ್ಲಿ ನೀವು ಹೇಗೆ ಇದ್ದಿರೆಂದು ನಿಮಗೆ ಈಗ ಹೊಳ

ಯಿತಷ್ಟೇ. ನೀವು ಬಹಳ ಓದಿದ್ದಿರಿ. ನಿಮ್ಮ ಹೆಸರು ಜಗತ್ತಿನ ತುಂಬೆಲ್ಲ ಹರಡಿತ್ತು. ಜನರೆಲ್ಲರೂ ನಿಮ್ಮನ್ನು ಗೌರವಿಸುತ್ತಿದ್ದರು. ಆದರೆ ನನಗಂತೂ ನಿಮ್ಮ ಸ್ವಚ್ಛಂದಶೀಲ, ಆನಂದಪೂರ್ಣ ತಾರುಣ್ಯ ಜೀವನವೇ ಹೆಚ್ಚೆಂದು ಕಂಡಿತು. ನೀವು ನನ್ನ ಜೀವನದ ಕೇಂದ್ರಬಿಂದುವಾದಿರಿ. ಹದಿಮೂರು ವರುಷದ ಹುಡುಗಿಯ ಬುದ್ಧಿಗನುಗುಣವಾಗಿ ನಾನು ವರ್ತಿಸತೊಡಗಿದೆ. ನಿಮ್ಮನ್ನು, ನಿಮ್ಮ ರೀತಿಯನ್ನು—ನಿಮ್ಮಲ್ಲಿ ಬರಹೋಗುವ ಜನರನ್ನು ಕದ್ದು ನೋಡತೊಡಗಿದೆ. ನೋಡಿದಂತೆಲ್ಲ ನಿಮ್ಮ ಬಗ್ಗೆ ಆಕರ್ಷಣೆ ಹೆಚ್ಚತೊಡಗಿತು. ನಿಮ್ಮಲ್ಲಿ ಬರುವ ಜನರಿಂದ ನಿಮ್ಮ ವ್ಯಕ್ತಿತ್ವ ಹೊರ ಬೀಳುತ್ತಿತ್ತು. ಅದರ ಪರಿಣಾಮ ನನ್ನ ಮೇಲಾಗದಿರುತ್ತಿರಲಿಲ್ಲ. ಎಲ್ಲ ತರಹದ ಜನರೂ ನಿಮ್ಮಲ್ಲಿ ಬರುತ್ತಿದ್ದರು. ಬರುವವರಲ್ಲಿ ಹೆಂಗಸರ ಸಂಖ್ಯೆಯೇ ಹೆಚ್ಚಾಗಿರುತ್ತಿತ್ತು. ಇದರಿಂದ ನಾನು ಯಾವ ಅಪಾರ್ಥವನ್ನೂ ತೆಗೆಯುವ ಗೋಜಿಗೆ ಹೋಗಲಿಲ್ಲ. ನಾನೊಮ್ಮೆ ಸ್ಕೂಲಿಗೆ ಹೋಗುವಾಗ ನಿಮ್ಮ ಕೋಣೆಯಿಂದ ಒಬ್ಬ ಹೆಂಗಸು ಬರುವುದನ್ನು ಕಂಡೆ. ಆಗ ನನ್ನ ವಯಸ್ಸು ಕೇವಲ ಹದಿಮೂರು ಎಂದೆನಲ್ಲವೇ! ಯಾವುದರ ಕಲ್ಪನೆ ಕೂಡ ಇರದ ವಯಸ್ಸು ಅದು. ಆದರೂ ನಿಮ್ಮನ್ನು ಪ್ರೀತಿಸುತ್ತಿದ್ದೆ.

ಆ ದಿನ! ಆ ಸಮಯ ನನಗಿನ್ನೂ ನೆನಪಿದೆ. ಅಂದೇ ನನ್ನ ಮನವನ್ನು ನಿಮಗೊಪ್ಪಿಸಿದೆ. ಗೆಳತಿಯೊಬ್ಬಳ ಕೂಡ ಮಾತನಾಡುತ್ತ ನಾನು ಬಾಗಿಲಲ್ಲಿ ನಿಂತಿದ್ದೆ. ನೀವು ಬಂದಿರಿ. ಯಾವುದೋ ಆವೇಶದಿಂದ ನಿಮ್ಮ ಬಾಗಿಲನ್ನು ತೆರೆಯಲು ನಾನು ಮುಂದೆ ಬಂದೆ. ಆಗಲೇ ನಾನು ನಿಮ್ಮನ್ನು ಮೊದಲ ಸಲ ತಾಗಿದ್ದು. ಪ್ರೇಮಪೂರ್ಣ ನೋಟದಿಂದ ನೀವು ನನ್ನನ್ನು ನೋಡಿದಿರಿ; ಕೋಮಲವಾದ ತುಟಿಗಳ ಮೇಲೆ ಅಷ್ಟೇ ಕೋಮಲವಾದ ಸುಳಿ ನಗೆ ಸುಳಿದು ಮಾಯವಾಯಿತು; ಮೃದುವಾಗಿ ಮಧುರವಾಗಿ ನುಡಿದಿರಿ— ' ಧನ್ಯವಾದ ' ಎಂದು.

"ಆಯಿತು. ಆಗಲೇ ನಾನು ನಿಮಗಾಗಿ ಎಲ್ಲವನ್ನೂ ಕಳೆದುಕೊಂಡೆ. ನಿಮ್ಮ ಮುಗುಳು ನಗೆ ನನ್ನದೆಲ್ಲವನ್ನೂ ಕೊಂಡಿತು. ಅದು ನಿಮ್ಮ ಸ್ವಾಭಾವಿಕ-ವರ್ತನೆ. ಆದರೆ ಆ ಪ್ರೇಮಮಯ, ವಿಶ್ವಾಸಪೂರ್ಣವಾದ ನಗೆಗೆ ಮಾನವನಿಗೆ ಮದವೇರಿಸುವ ರೂಪು ಕೂಡ ತತ್ತರಿಸುತ್ತಿತ್ತು. ಪ್ರತಿ

ಯೊಂದು ಹೆಣ್ಣಿನ ಕೂಡ ನೀವು ಅದೇ ರೀತಿಯಾಗಿ ವರ್ತಿಸುತ್ತಿದ್ದಿರಿ. ನೀವು ಬೇಕೆಂತಲೇ ಹಾಗೇನೂ ಮಾಡುತ್ತಿರಲಿಲ್ಲ. ಆದರೂ ನಿಮ್ಮ ವರ್ತನೆ ಯಾರಿಗೂ ಉನ್ಮಾದಕವಾಗಿತ್ತು. ಹದಿಮೂರರಲ್ಲಿ ನನಗಾವುದೂ ಅಷ್ಟಾಗಿ ಗೊತ್ತಿರಲಿಲ್ಲ ಆದರೂ ನಿಮ್ಮ ಆ ನೋಟ ನನ್ನ ದೇಹದಲ್ಲೆಲ್ಲ ಅಗ್ನಿ ಜ್ವಾಲೆ ಹಬ್ಬಿಸಿತು. ಹುಡುಗಾಟ ಅಳಿದು ನಾನೊಂದು ಹೆಣ್ಣು ಎಂಬ ಭಾವನೆ ಮೊದಲನೆಯ ಸಲ ಬೆಳೆದು ನಿಂತಿತು;— ಮುಂದಿನ ಜೀವನದ ಲ್ಲೆಲ್ಲ ನಿಮ್ಮದೇ ಆಗಿರಬೇಕಾದ ಹೆಣ್ಣು ! - ! !

ಗೆಳತಿ ಕೇಳಿದಳು! ಇವರ್ಯಾರು?

ನನ್ನಿಂದ ಮೊದಲು ಉತ್ತರಿಸುವುದೇ ಆಗಲಿಲ್ಲ. ನಿಮ್ಮ ಹೆಸರನ್ನು ಉಚ್ಚರಿಸುವದೇ ನನ್ನಿಂದ ಅಸಂಭವವಾಯಿತು. ಆ ಕ್ಷಣದಲ್ಲಿ ಅದು ನನಗೆ ಪವಿತ್ರವಾಯಿತು. ನನ್ನ ಬಾಳಿನ ಗುಟ್ಟಾಯಿತು.

'ಇದೇ ಮನೆಯಲ್ಲಿ ಇರುತ್ತಾರೆ' ಎಂದು ಏನೋ ಹೇಳಿದೆ.

'ಆದರೆ, ನೀನೇಕೆ ಅವರನ್ನು ಕಂಡು ಜಾಜೀಕಾಯಿಯಾದೆ.'

ಅವಳು ನನ್ನ ಹಾಸ್ಯ ಮಾಡುತ್ತಿದ್ದಾಳೆ. ನನ್ನ ಗುಟ್ಟನ್ನರಿಯಲು ಯತ್ನಿಸುತ್ತಿದ್ದಾಳೆ ಅನ್ನಿಸಿತು ನನ್ನ ಗಲ್ಲಗಳು ನಾಚಿಕೆಯಿಂದ ಕೆಂಪೊಡೆದವು. ಹುಸಿ ಮುನಿಸಿನಿಂದ 'ಥುತ್' ಎಂದೆ.

ಅವಳು ನಕ್ಕಳು. ನಗೆಯ ತುಂಬ ವ್ಯಂಗ್ಯ ತುಂಬಿತ್ತು. ನಾನು ಓಡಿ ಹೋಗಿ ಮನೆ ಸೇರಿದೆ.

ಅಂದಿನಿಂದಲೇ ನಾನು ನಿಮ್ಮನ್ನು ಪ್ರೀತಿಸಿದ್ದೇನೆ. ಹೆಣ್ಣಿನಿಂದ ಇಂಥ ಮಾತುಗಳನ್ನು ಕೇಳುವ ಅಭ್ಯಾಸ ನಿಮಗಿಲ್ಲವೆಂದು ನಾನು ಬಲ್ಲೆ. ಆದರೆ ನನ್ನಂಥ ಆಶೆ ರಹಿತವಾದ ಪ್ರೇಮ ಮಾತ್ರ ನಿಮಗಾರೂ ತೋರಿರಲಿಕ್ಕಿಲ್ಲ. ನನ್ನದಾರೊಡನೆಯೂ ಆಳವಾದ ಗೆಳೆತನವಿರಲಿಲ್ಲ. ಎಲ್ಲ ರೀತಿಯ ಚಟಗಳಿಂದ ನಾನು ದೂರವಾಗಿದ್ದೆ. ನನ್ನ ವಿಚಾರವೆಲ್ಲವೂ ನಿಮ್ಮಲ್ಲಿಯೇ ಕೇಂದ್ರೀಕೃತವಾಯಿತು. ತಂದೆ ಮೊದಲೇ ತೀರಿಕೊಂಡಿದ್ದರು. ತಾಯಿಗೆ ತನ್ನ ಚಿಂತೆ ! ಅಕ್ಕಿ ಗೋದಿಯ ವಿಚಾರಗಳ ತಿಕ್ಕಾಟ

ದಲ್ಲಿ ಅವಳು ಮಗಳ ಭಾವನೆಗಳನ್ನು ತಿಳಿಯುವುದಾದರೂ ಹೇಗೆ? ....ನೀವು ನನಗಾಗಿ....ಆದರೆ ಹೋಲಿಸಲೇನು? ನೀವು ನನ್ನ ಬಾಳಿಗಿಂತಲೂ ಹೆಚ್ಚಿಗೆ ಪ್ರಿಯರಾದಿರಿ. ನಿಮ್ಮ ಹೊರತಾಗಿ ನನಗೆ ಯಾವ ವಸ್ತುವೂ ಆಕರ್ಷಕವಾಗಲಿಲ್ಲ. ನೀವು ನನ್ನದೆಲ್ಲವನ್ನೂ ಬದಲಿಸಿದಿರಿ. ನಿಮ್ಮ ಪುಸ್ತಕ ಪ್ರೇಮವನ್ನು ಕಂಡು ನಾನೂ ಹೆಚ್ಚಾಗಿ ಪುಸ್ತಕಗಳನ್ನೋದ ತೊಡಗಿದೆ. ನೀವು ಸಂಗೀತ ಪ್ರೇಮಿಗಳೆಂದು ತಿಳಿದಾಗ ಸಂಗೀತ ಕಲಿಯಲೂ ಯತ್ನಿಸಿದೆ. ನೀವು ನನ್ನನ್ನು ಕಂಡಾಗ ಮುಖ ಮುದುಡಿಕೊಳ್ಳಬಾರದೆಂದು ನನ್ನ ಬಟ್ಟೆ ಸ್ವಚ್ಛವಾಗಿರುವಂತೆ ನೋಡಿಕೊಳ್ಳುತ್ತಿದ್ದೆ. ನಿಮಗಾಗಿ ನಾನೆಲ್ಲವನ್ನೂ ಮಾಡುತ್ತಿದ್ದೆ. ಆದರೆ ನಿಮಗೆ ಇದೆಲ್ಲವನ್ನೂ ನೋಡಲು ಸಮಯವೆಲ್ಲಿ ?........ ಎಂಥ ಮೂರ್ಖಳು ನಾನು !

"ಆಗಲೂ ನಿಮ್ಮನ್ನು ನೋಡುವುದರಲ್ಲಿಯೇ ದಿನಗಳು ಕಳೆಯುತ್ತಿದ್ದವು. ನಿಮ್ಮ ಬಾಗಿಲಿಗೆ ಇದ್ದ ಸಣ್ಣ ರಂಧ್ರದಿಂದ ಕೋಣೆಯದೆಲ್ಲವನ್ನೂ ನೋಡಬಹುದಾಗಿತ್ತು. ನಗಬೇಡಿ. ಆಗ ನನಗೆ ಪೂರ್ಣ ಹುಚ್ಚೇ ಹಿಡಿದಿತ್ತು ಎನ್ನಿ. ಹೊರಗೆ ಅತಿಶಯ ಚಳಿ ಇರುತ್ತಿದ್ದರೂ ಲೆಕ್ಕಿಸದೆ ರಾತ್ರಿ ಆ ರಂಧ್ರದೊಳಗಿಂದ ನೋಡುತ್ತ ಕೂಡುತ್ತಿದ್ದೆ. ತಾಯಿಯ ಕರೆಯ ಲಕ್ಷ್ಯ ಕೂಡ ಇರುತ್ತಿರಲಿಲ್ಲ. ತುಂಬಿದ ಹೃದಯದಿಂದ ನಾನು ಯಾವಾಗಲೂ ನಿಮ್ಮ ಬಳಿಯೇ ಇರುತ್ತಿದ್ದೆ. ನೀವಿದನ್ನರಿಯಿರಿ. ಹದಿಮೂರರಿಂದ ಹದಿನಾರು ವರುಷಗಳ ವರೆಗಿನ ಮೂರು ವರ್ಷದ ಜೀವನದಲ್ಲಿ ಪ್ರತಿಯೊಂದು ಕ್ಷಣವನ್ನೂ ನಿಮ್ಮ ಪರಿಚಯಕ್ಕಾಗಿ ವಿನಿಯೋಗಿಸಿದೆ. ಆಗ ಎಂಥೆಂಥ ಮೂರ್ಖತೆಯನ್ನು ನಾನು ಮಾಡಿಲ್ಲ? ಬಾಗಿಲಿಗೆ ತಗುಲಿ ನೀವು ಹೋದರೆ ಆ ಸ್ಥಳಕ್ಕೆ ಮುತ್ತಿಡುತ್ತಿದ್ದೆ. ನಿಮ್ಮ ತುಟಿಯಿಂದ ಹೊರಬಿದ್ದ ಸಿಗರೇಟಿನ ತುಂಡು ನನಗೆ ಪವಿತ್ರ ವಸ್ತುವಾಗುತ್ತಿತ್ತು. ನಿಮ್ಮ ಕೋಣೆಯಲ್ಲಿ ದೀಪ ಉರಿಯುತ್ತಿದ್ದರೆ ಮಾತ್ರ ನನಗೆ ಸಮಾಧಾನ. ಇಲ್ಲವಾದರೆ ಎಲ್ಲಿಲ್ಲದ ತಳಮಳ! ಬಹಳ ಕಷ್ಟದಿಂದ ಬರುವ ಕಣ್ಣೀರನ್ನು ತಡೆಹಿಡಿಯುತ್ತಿದ್ದೆ.

"ಇದೆಲ್ಲವನ್ನೂ ಹುಚ್ಚು ಹುಡುಗಿಯ ಮೆದುಳಿನ ವಿಕಾರವೆನ್ನಬಹುದು ನೀವು. ಆದರೆ ವಾಸ್ತವ ಇದಕ್ಕೆ ವಿರುದ್ಧವಾಗಿದೆ. ಕಾಲದ ಕುಲುಮೆಯಲ್ಲಿ ಬೆಂದು ಬಂದಿತ್ತು ನನ್ನ ಪ್ರೇಮ. ಅದರ ಬಗ್ಗೆ ನಾನು ಜೀವ

ನಾದ್ಯಂತವೂ ಬರೆಯ ಬಲ್ಲೆ. ನನ್ನ ನಿಮ್ಮ ವಿಶೇಷ ಪರಿಚಯವಿರದಿದ್ದರೂ ಕೂಡ ಯಾವ ಆತಂಕವೂ ಆಗಲಾರದು. ಪರಿಚಯವಿರಬೇಕಾದರೂ ಹೇಗೆ ? ಯಾವಾಗಲಾದರೂ ಆಕಸ್ಮಿಕವಾಗಿ ಅಂಗಳದಲ್ಲಿ ಭೆಟ್ಟಿಯಾದರೆ ನಾನು ಮುಖ ಕೆಳಗೆ ಮಾಡಿಕೊಂಡು ಹೋಗಿ ಬಿಡುತ್ತಿದ್ದೆ. ಆ ಕ್ಷಣಗಳೆಲ್ಲವನ್ನೂ ನೀವು ಮರೆತಿದ್ದರೂ ನಾನು ಮರೆತಿಲ್ಲ. ಬೇಕಾದರೆ ನಿಮಗೆ ಆ ದಿನಗಳ ದಿನಚರಿಯನ್ನೇ ಒದಗಿಸಬಲ್ಲೆ. ನಿಮ್ಮ ಬೇಸರ ಹೆಚ್ಚೀತೆಂಬ ಭಯದಿಂದ ಸುಮ್ಮನಿದ್ದೇನೆ. ಆದರೆ 'ಒಂದು' ಮಾತ್ರ ಹೇಳಲೇ ಬೇಕು. ಅದು ನಿಮಗೆ ಕ್ಷುಲ್ಲಕವೆನಿಸಿದರೂ ನನಗೆ ಅರ್ಥ ಪೂರ್ಣ ಘಟನೆ :—

"ಅಂದು ರವಿವಾರವಿರಬಹುದು. ನೀವು ಕೋಣೆಯಲ್ಲಿರಲಿಲ್ಲ. ಆಳು ನಿಮ್ಮ ಹಾಸಿಗೆ ಜಾಡಿಸುತ್ತಿದ್ದ. ಆ ಭಾರಕ್ಕೆ ವಯಸ್ಸಾದ ಅವನ ಕೈ ಏಳುತ್ತಿರಲಿಲ್ಲ. ನಾನು ಬರಲೆ ಎಂದೆ. ಅವನು ಚಕಿತನಾದರೂ ಅಡ್ಡಿ ಮಾಡಲಿಲ್ಲ. ಕೆಲಸವಾದನಂತರ ನಿಮ್ಮ ಕೋಣೆ ಹೊಕ್ಕೆ. ಅದೇ ಮೊದಲನೆಯ ಸಲ–ನಿಮ್ಮ ಕೋಣೆ ಹೊಕ್ಕು ಎಲ್ಲವನ್ನೂ ಚನ್ನಾಗಿ ನೋಡಿದ್ದು; ನಿಮ್ಮ ಭಾವ ಚಿತ್ರ–ನಿಮ್ಮ ಪುಸ್ತಕ—ನಿಮ್ಮ ಬಟ್ಟೆ ಎಲ್ಲದರ ಮೇಲೂ ಕೃಪಣಳಂತೆ ಕಣ್ಣು ಹಾಯಿಸಿದೆ. ಆಳನ್ನು ಕೇಳಿ ಇನ್ನೂ ಸ್ವಲ್ಪ ಅಲ್ಲಿಯೇ ಇರಬಹುದಾಗಿತ್ತು. ಆದರೆ ಧೈರ್ಯವಾಗಲಿಲ್ಲ. ಹೊರಗೆ ಓಡಿ ಬಂದೆ. ನನ್ನ ಸ್ವಪ್ನಗಳಲ್ಲಿ ಸಾಕಾರತೆಯನ್ನು ಹೆಚ್ಚಿಸಲು ಆ ಕೆಲವು ನಿಮಿಷಗಳು ಸಾಕಾಗಿದ್ದವು."

"ಆ ಕೆಲ ನಿಮಿಷಗಳು—ನನ್ನ ಜೀವನದ ಅಮೂಲ್ಯ ನಿಧಿಯಾಗಿ ಬಿಟ್ಟವು. ನೀವರಿಯದಂತೆಯೆ ನನ್ನ ಜೀವನ ನಿಮ್ಮನ್ನೇ ಅವಲಂಬಿಸಿತ್ತು ಎಂಬುದನ್ನು ತಿಳಿಸಲು ಇದನ್ನು ಹೇಳಿದೆ ಅಷ್ಟೆ. ಓ ! ಆ ನಂತರದ ಭಯಾನಕ ಕ್ಷಣ ! ನೆನೆಸಿದರೆ ಮೈ ನಡುಗುತ್ತಿದೆ. ನಿಮ್ಮ ಯೋಚನೆಯಲ್ಲಿರುವ ನನಗೆ ಹೊರಗಿನದೇನೂ ಕಾಣುತ್ತಿರಲಿಲ್ಲ. ನನ್ನ ತಾಯಿಯ ದೂರದ ಸಂಬಂಧಿಕನೊಬ್ಬ ಮೇಲಿಂದ ಮೇಲೆ ನಮ್ಮ ಮನೆಗೆ ಬರುತ್ತಿರುವದನ್ನು ಕೂಡ ನಾನು ಗಮನಿಸಲಿಲ್ಲ. ಅಮ್ಮ ಯಾವಾಗಲಾದರೂ ಅವನ ಜೊತೆ ಸಿನೆಮಾಕ್ಕೆ ಹೋಗುತ್ತಿದ್ದಳು. ಅದರಿಂದ ನನಗೆ ಸಂತೋಷವೇ ಆಗುತ್ತಿತ್ತು–ಆ ಗಂಟೆಗಳಲ್ಲಿ ಆದರೂ ನಿಮ್ಮನ್ನು ನಿರ್ಭಯವಾಗಿ ನೋಡಬಹುದಲ್ಲ ಎಂದು.

" ಒಂದು ದಿನ ಅಮ್ಮ ನನ್ನನ್ನು ಕರೆದು ಬಳಿಯಲ್ಲಿ ಕುಳ್ಳಿರಿಸಿಕೊಂಡು 'ಮಗು, ನಿನಗೊಂದು ಮಾತು ಕೇಳಬೇಕಾಗಿದೆ' ಎಂದಳು. ನನ್ನ ಎದೆ ಧಸಕ್ಕೆಂದಿತು. ಎಲ್ಲಿಯಾದರೂ ನನ್ನ ಗುಟ್ಟು ಹೊರಬಿದ್ದಿದೆಯೆ ? ಎಂದು ಹೆದರಿದೆ. ಅಂಜುತ್ತ ಅವಳ ಮುಖದ ಕಡೆ ನೋಡಿದೆ. ಅವಳು ಸ್ವತಃ ಲಜ್ಜಿತಳಾದಂತೆ ತೋರಿತು. ಆ ದೂರದ ಸಂಬಂಧಿಕ ಅಮ್ಮನನ್ನು ಮದುವೆ ಮಾಡಿಕೊಳ್ಳಲು ಸಿದ್ಧನಾಗಿದ್ದನಂತೆ........ಅಮ್ಮ ನನ್ನ ಸಲುವಾಗಿ ಒಪ್ಪಿದ್ದಳಂತೆ. ಆದರೆ ನಾನು ನಿಮಗಾಗಿ ಚಿಂತಿಸತೊಡಗಿದೆ. ವಿಧಿ ನಿಮ್ಮ ದರ್ಶನದಿಂದ ಕೂಡ ವಂಚಿಸುವಂತೆ ಕಾಣಿಸಿತು. ಧೈರ್ಯದಿಂದ ಕೇಳಿದೆ.

'ಆದರೆ ನಾವು ಇರುವದು ಇಲ್ಲೇ ಅಲ್ಲವೆ ಅಮ್ಮ ? '

'ಇಲ್ಲ ಮಗು ನಾವು ಬೇರೂರಿಗೆ, ಅವರ ಮನೆಗೆ, ಹೋಗಬೇಕು. ಅದು....' ನನ್ನಿಂದ ಮುಂದೆ ಆ ವಿಷಯವನ್ನೇ ಕೇಳುವುದಾಗಲಿಲ್ಲ. ಕಣ್ಣಿಗೆ ಕತ್ತಲು ಬಂದಿತು. ಆ ಮೇಲೆ ತಿಳಿಯಿತು ನಾನು ಮೂರ್ಛೆ ಹೋಗಿದ್ದೆನೆಂದು. ಆ ಮುಂದಿನ ನಾಲ್ಕುದಿನಗಳನ್ನು ಹೇಗೆ ಕಳೆದೆನೆಂಬುದು ಹೇಳುವುದೇ ಕಠಿಣ. ನನ್ನ ಗುಟ್ಟು ರಟ್ಟಾಗದಂತೆ ಇಲ್ಲಿಂದ ಬರಲಾರೆ ಎಂದು ಹೇಗೆ ಹೇಳಬಲ್ಲೆ ಅಮ್ಮನಿಗೆ ? ನಾನಿಲ್ಲದಾಗ ಮನೆ ಬಿಡುವ ಎಲ್ಲ ಸಿದ್ಧತೆ ನಡೆಯಿತು. ಸ್ಕೂಲಿಗೆ ಹೋದಾಗ ಒಂದೊಂದಾಗಿ ಸಾಮಾನು ಪಾಟ ತೊಡಗಿದವು. ಒಂದು ದಿನ ನಾನು ಶಾಲೆಯಿಂದ ಮರಳಿದಾಗ ಮನೆ ಬರಿದಾಗಿತ್ತು. ನಮ್ಮ ಹಾಸಿಗೆಗಳಷ್ಟೇ ಉಳಿದಿದ್ದುವು. ಮರುದಿನ ಹೋಗಬೇಕಾಗಿತ್ತು, ನಮ್ಮ ಹೊಸ ತಂದೆಯ ಊರಿಗೆ.

" ನಿಮ್ಮ ಹೊರತಾಗಿ ಜೀವಿಸುವದು ಕಠಿಣವೆನ್ನಿಸಿತು. ಆಗ ನೀವೇ ನನ್ನ ಸರ್ವಸ್ವವಾಗಿದ್ದಿರಿ. ನಾನೇನು ಯೋಚಿಸುತ್ತಿದ್ದೆನೋ ನನಗೇ ಗೊತ್ತಿರಲಿಲ್ಲ. ಅಮ್ಮ ಹೊರಗೆ ಹೋಗಿದ್ದಳು. ಸ್ಕೂಲಿನ ಬಟ್ಟೆಯಲ್ಲಿಯೇ ನಿಮ್ಮ ಬಾಗಿಲಿನವರೆಗೆ ಬಂದೆ. ಯಾವುದೋ ಒಂದು ಶಕ್ತಿ ನನ್ನನ್ನು ನಿಮ್ಮ ಕಡೆ ಎಳೆಯುತ್ತಿದ್ದಿತು. ನಿಮ್ಮ ಕಾಲ ಮೇಲೆ ಬಿದ್ದು 'ನನ್ನನ್ನು ನಿಮ್ಮ ದಾಸಿಯನ್ನಾಗಿ ಇಟ್ಟುಕೊಳ್ಳಿ' ಎಂದು ಕೇಳಬೇಕೆನಿಸಿತ್ತು. ನೀವು ನಗಬಹುದು. ಆದರೆ ಆ ಚಳಿಯಲ್ಲಿ ನಾನು ಕಳೆದ ಕ್ಷಣಗಳ ಅರಿವು ನಿಮಗಿದ್ದರೆ........! ಶಕ್ತಿಯೆಲ್ಲವನ್ನೂ ಕೈಗೆ ಕೊಟ್ಟು ನಿಮ್ಮ ಬಾಗಿಲ ಬೆಲ್ ಒತ್ತಿದೆ. ಗಂಟೆ

ಯಾಯಿತು. ಮತ್ತೆ ನಿಶ್ಯಬ್ದ. ಹೃದಯದ ಹೊಡೆತ ಕಡಿಮೆಯಾಯಿತು. ರಕ್ತ ಹೆಪ್ಪುಗಟ್ಟಿದಂತೆನಿಸಿತು. ಬಿಗಿಯಾಗಿ ಕೂಡ ಉಸಿರಾಡಿಸದೆ ನಿಮ್ಮ ಬರುವಿಕೆಗಾಗಿ ಕಾಯತೊಡಗಿದೆ.

ನೀವು ಬರಲಿಲ್ಲ—ಯಾರೂ ಬರಲೇ ಇಲ್ಲ. ನಿಮ್ಮ ಆಳು ಕೂಡ ಹೊರಗೆ ಹೋಗಿದ್ದ. ನಿರಾಶೆಯಿಂದ ನನ್ನ ಕೋಣೆಗೆ ಬಂದುಬಿಟ್ಟೆ. ಹರ ದಾರಿಗಳ ಹಾದಿ ನಡೆದು ಬಂದವರಂತೆ ದಣಿವು; ಎದೆಯಲ್ಲಿ ಬೆಂಕಿ ಹೊತ್ತ ತೊಡಗಿತ್ತು. ನಿಮ್ಮೊಡನೆ ಮಾತನಾಡಬೇಕು—ನಿಮ್ಮನ್ನು ಕಾಣಬೇಕು ಎಂದು ದೃಢ ಸಂಕಲ್ಪ ಮಾಡಿದ್ದೆ. ಅದರಲ್ಲಿ ಇಂದ್ರಿಯಜನ್ಯ ವಿಕಾರ ವಾವುದೂ ಇರಲಿಲ್ಲ. ಈಗ ನಾನು ಹೇಳಬಲ್ಲೆ. ಆಗ ನಾನಿದೆಲ್ಲದಕ್ಕೆಲ್ಲ ಅಪರಿಚಿತಳಿದ್ದೆ. ನಿಮ್ಮ ಚಿಂತನೆಯಲ್ಲಿ ಅಂಥವುಗಳ ಬಗ್ಗೆ ವಿಚಾರ ಮಾಡಲು ಆಸ್ಪದವೇ ಇರುತ್ತಿರಲಿಲ್ಲವೇನೋ ! ಕೇವಲ ಒಂದು ಸಲ—ಒಂದೇ ಒಂದು ಸಲ ನಿಮ್ಮನ್ನು ನೋಡಲು ಹಾತೊರೆಯುತ್ತಿತ್ತು ಮನಸ್ಸು. ಅಮ್ಮ ಮಲ ಗಲು ಹೋದಳು. ಮತ್ತೆ ಹೊರಗೆ ಬಂದು ನಿಮ್ಮನ್ನೇ ನಿರುಕಿಸ ತೊಡಗಿದೆ. ಜನವರಿ ತಿಂಗಳು ರಾತ್ರಿ; ಚಳಿ ಹೆಚ್ಚುತ್ತಿತ್ತು. ಆದರೂ ಹೊದೆದುಕೊಳ್ಳಲು ಏನೂ ತರಲಿಲ್ಲ. ಎಲ್ಲಿಯಾದರೂ ನಿದ್ದೆ ಹತ್ತಿದಾಗ ನನ್ನ ದೇವ ಬಂದು ಹೋಗಿ ಬಿಟ್ಟರೆ! ಚಳಿ ಹೆಚ್ಚಾದಾಗ ಎದ್ದು ತಿರುಗಾಡುತ್ತಿದ್ದೆ; ಅಷ್ಟೇ ಮೈ ಕಾವೇರುತ್ತಿತ್ತು.

ಸುಮಾರು ಎರಡೋ, ಮೂರೋ ಹೊಡೆಯುವಾಗ ಬಾಗಿಲು ತೆರೆ ಯಿತು. ಹೆಜ್ಜೆಯ ಮೇಲಿಂದ ನೀವು ಎಂದು ಗುರುತಿಸಿದೆ. ಚಳಿ ಓಡಿ ಹೋಗಿತ್ತು. ಸಾವಕಾಶ ಬಾಗಿಲು ತೆರೆದೆ;— ಓಡಿ ಬಂದೆ ನಿಮ್ಮ ಚರಣದಲ್ಲಿ ಬೀಳಲು ಆದರೆ ಆಶೆಯನ್ನು ಬಿಗಿ ಹಿಡಿದೆ. ಹೆಜ್ಜೆ ಸಮೀಪಿಸುತ್ತ ಬಂದಂತೆ ನೀವೇ ಎಂದು ಖಚಿತವಾಗುತ್ತ ಬಂತು.

ಹೌದು ಬಂದವರೇನೋ ನೀವೇ! ಆದರೆ ಒಬ್ಬರೇ ಇರಲಿಲ್ಲ. ಸಣ್ಣ ನಗುವೊಂದು ಕೇಳಿಸಿತು. ನೀವೂ ನಕ್ಕು ಏನೋ ಹೇಳಿದಿರಿ. ಜೊತೆಯಲ್ಲಿ ಒಬ್ಬ ಹೆಂಗಸಿದ್ದಳು.

ಆ ರಾತ್ರಿಯನ್ನು ಹೇಗೆ ಕಳೆದೆನೆಂಬುದನ್ನು ಹೇಳಲಾರೆ. ಮುಂಜಾನೆ

ಎಂಟು ಗಂಟೆಗೆ ಅಮ್ಮ ನನ್ನನ್ನು ಕರೆದುಕೊಂಡು ಹೊರಟಳು. ನನ್ನಲ್ಲಿ ಒಲ್ಲೆನ್ನುವ ಶಕ್ತಿಯೇ ಉಡುಗಿ ಹೋಗಿತ್ತು............

× × × ×

ನನ್ನ ಮಗು ನಿನ್ನೆ ರಾತ್ರಿ ಹೊರಟು ಹೋಯಿತು. ಈಗ ನಾನು ಬದುಕ ಬೇಕಾದರೆ ಈ ವಿಶಾಲ ಜಗತ್ತಿನಲ್ಲಿ ಏಕಾಕಿಯಾಗಿ ಬದುಕಬೇಕು. ನಾಳೆ ಗೆಳೆಯರು ಬರಬಹುದು. ಸಂಬಂಧಿಕರು ಬರಬಹುದು. ಸಾವಿರ ಸಮಾಧಾನ ಹೇಳಬಹುದು. ಆದರೆ ಇದೆಲ್ಲ ಮಾತಿನ ಮೋಹಕತೆಯಿಂದ ನನಗಾಗಬೇಕಾದುದೇನು ? ನನಗಿಷ್ಟೇ ಗೊತ್ತು—ನಾನು ಏಕಾಕಿಯಾಗಿ ಬದುಕಬೇಕು. ಮಾನವ ಸಮಾಜದಲ್ಲಿ ಇದಕ್ಕಿಂತಲೂ ಭಯಾನಕವಾದುದು ಮತ್ತಾವುದೂ ಇಲ್ಲ. ಇದರ ಕಟು ಅನುಭವ ನನಗೆ ಆದದ್ದು ಹದಿನಾರು–ಹದಿನೆಂಟರ ನಡುವಿನ ಎರಡು ವರುಷಗಳಲ್ಲಿ. ಹೊಸ ತಂದೆ ನನ್ನನ್ನು ಪ್ರೀತಿಯಿಂದ ಕಾಣುತ್ತಿದ್ದರು. ತಾಯಿ ನನ್ನ ಇಚ್ಛೆಯನ್ನು ಪೂರ್ಣ ಮಾಡಲು ಸಿದ್ಧಳಿರುತ್ತಿದ್ದಳು. ಸಮವಯಸ್ಕರು ಗೆಳೆತನ ಬೆಳೆಸಲು ಹಾತೊರೆಯುತ್ತಿದ್ದರು. ಆದರೆ ನನಗೆ ಇದಾವುದೂ ಬೇಕಾಗಿರಲಿಲ್ಲ. ನಿಮ್ಮಿಂದ ದೂರ ವಿದ್ದು ಸುಖಸಂತೋಷಗಳಲ್ಲಿ ಪ್ರೈ ಮರೆಯುಲು ಜೀವ ಹೇಸುತ್ತಿತ್ತು. ಆತ್ಮಪೀಡನೆ, ಮೌನ ಇವೆರಡರ ಸಹವಾಸದಲ್ಲಿ ವಿಷಾದಮಯ ಜಗತ್ತನ್ನು ಕಲ್ಪಿಸಿಕೊಂಡು ಅದರಲ್ಲಿಯೇ ವಾಸ ಮಾಡ ತೊಡಗಿದೆ. ನನಗಾಗಿ ಹೊಸ ಬಟ್ಟೆಗಳು ಬರುತ್ತಿದ್ದವು. ನೃತ್ಯ ಸಂಗೀತಗಳಿಗೆ ಆಮಂತ್ರಣ ಬರುತ್ತಿದ್ದುವು. ನಾನು ಇವೆಲ್ಲವುಗಳಿಂದ ದೂರ ಓಡುತ್ತಿದ್ದೆ. ಮನೆಯಿಂದ ಹೊರ ಬೀಳುತ್ತಿದ್ದುದೇ ಅಪರೂಪ. ಆ ಊರಿನ ಎರಡು ವರ್ಷಗಳ ಆಗಿನ ಜೀವನದಲ್ಲಿ ಹತ್ತು ಹನ್ನೆರಡು ಜನರಿಗಿಂತ ಹೆಚ್ಚಿನ ಪರಿಚಯಗಳಾಗಿಲ್ಲವೆಂದರೆ ನಂಬುವಿರಾ? ದುಃಖವೇ ನನಗೆ ಮೊರೆಯಾಯಿತು. ವೇದನೆಯೇ ಹಾಯೆನಿಸಿತು. ಹೀಗೆ ನಿಮ್ಮಿಂದ ದೂರಾದ ನೋವನ್ನು ಇವುಗಳೊಡಗೂಡಿಸಿ ನುಂಗಲು ಯತ್ನಿಸುತ್ತಿದ್ದೆ. ಗಂಟೆ ಗಂಟೆಗಳವರೆಗೆ ಮನೆಯಲ್ಲಿ ಏಕಾಕಿಯಾಗಿ ಕುಳಿತು ನಿಮ್ಮ ಬಗ್ಗೆಯೇ ಮೆಲಕು ಹಾಕುತ್ತಿದ್ದೆ. ಒಂದೊಂದು ಸಣ್ಣ ಘಟನೆಯೂ ಕೂಡ ಕಣ್ಣು ಮುಂದೆ ಸುಳಿಯುತ್ತಿತ್ತು. ಇನ್ನೂ ಅವು ಹೊಸದಾಗಿಯೇ ಕಾಣುತ್ತಿವೆ ನನಗೆ.

ಇಃಪ್ರಕಾರ ನನ್ನ ಜೀವ ನಿಮ್ಮ ಸುತ್ತಲೇ ಸುಳಿಯುತ್ತಿತ್ತು. ನೀವು ಬರೆದ ಎಲ್ಲ ಪುಸ್ತಕಗಳನ್ನು ಕೊಂಡಿದ್ದೆ. ಪತ್ರಿಕೆಯಲ್ಲಿ ನಿಮ್ಮ ಹೆಸರು ಕಂಡ ದಿನ ನನಗೆ ಒಂದು ಹಬ್ಬ. ನಿಮ್ಮ ಪುಸ್ತಕಗಳನ್ನು 'ಎಷ್ಟು' ಸಲ ಓದಿರುವೆನೆಂದರೆ ನೀವು ನಂಬಲಾರಿರಿ. ಅವು ಪೂರ್ಣ ಕಂಠಪಾಠದಂತಿವೆ. ಅಪರಾತ್ರಿಯಲ್ಲಿ ಎಬ್ಬಿಸಿ ಒಂದು ಸಾಲು ಹೇಳಿದರೆ ತಡೆಯಿಲ್ಲದೆ ಮುಂದಿನದನ್ನು ಹೇಳಬಲ್ಲೆ. ನಿಮ್ಮ ಪ್ರತಿಯೊಂದು ಮಾತು ನನಗೆ ಪೂಜ್ಯವಾಗಿತ್ತು.

"ಆದರೆ ಅದೆಲ್ಲ ನೆನೆದು ಏನು ಫಲ....? ನಾನಾಗ ಬಾಲ್ಯಾವಸ್ಥೆಯಲ್ಲಿ ಉಳಿದಿರಲಿಲ್ಲ. ತಾರುಣ್ಯ ನನ್ನ ಜೀವನದಲ್ಲಿ ಕಾಲಿಡತೊಡಗಿತ್ತು ಹಾದಿಯಲ್ಲಿ ಯುವಕರು ನುಂಗುವಂತೆ ನೋಡುತ್ತಿದ್ದರು. ಇದರಿಂದ ನನಗೆ ಅತಿಶಯ ಸಿಟ್ಟು ಬರುತ್ತಿತ್ತು. ನಿಮ್ಮ ಹೊರತಾಗಿ ಮತ್ತೊಬ್ಬರ ಕಡೆ ನೋಡುವುದು ಕೂಡ ಪಾಪವೆನಿಸುತ್ತಿತ್ತು. ನಿಮಗಾಗಿ ನನ್ನಲ್ಲಿ ಅಚಲ ಪ್ರೇಮವಿತ್ತು. ಆದರೆ ವಯಸ್ಸಿನ ಜೊತೆಗೆ ರೂಪು ಕೂಡ ಬದಲಾಯಿಸುತ್ತ ನಡೆಯಿತು. ದೇಹದ ಬೆಳವಣಿಗೆ, ಇಂದ್ರಿಯ ವಿಕಾಸತೆಯೊಡನೆ ಅದರ ತೀವ್ರತೆಯೂ ಹೆಚ್ಚಾಗತೊಡಗಿತು. ಅಂದು ಮುಗ್ಧ ಬಾಲಿಕೆಯ ಅಂತರಾಳದಲ್ಲಿ ಲಾಸ್ಯವಾಡುತ್ತಿದ್ದ ಭಾವನೆಗಳು ಇಂದು ತರುಣಿಯ ಎದೆಯಲ್ಲಿ ಪ್ರಚಂಡ ಲಾಲಸೆಯಿಂದ ತಾಂಡವವಾಡುತ್ತಿದ್ದವು ನಿಮ್ಮಲ್ಲಿ ಅಡಗಲು ನನ್ನ ಜೀವ ದೇಹಗಳೆರಡೂ ಹಾತೊರೆಯುತ್ತಿದ್ದವು.

"ನನ್ನ ಗೆಳತಿಯರೆಲ್ಲರೂ ನನ್ನನ್ನು ಹೇಡಿ ಎನ್ನುತ್ತಿದ್ದರು. ಅವರ ಯಾವ ಮಾತಿನ ಕಡೆಗೂ ನನ್ನ ಲಕ್ಷ್ಯವಿರುತ್ತಿರಲಿಲ್ಲ. ನೀವೇ ನೀವು. ನಿಮ್ಮಲ್ಲಿ ಮರಳಬೇಕು ಎನ್ನುವ ವಿಚಾರವೊಂದೇ ಕುಣಿಯುತ್ತಿತ್ತು. ಅಪ್ಪ ನನ್ನನ್ನು ಹೊಟ್ಟೆಯ ಮಗಳಂತೆ ನೋಡಿಕೊಳ್ಳುತ್ತಿದ್ದರು. 'ಎಷ್ಟು ದಿನ ಮನೆಯಲ್ಲಿ ಹೀಗೆಯೇ ಕಾಲು ಮುರಿದವರಂತೆ ಕೂಡಬೇಕು; ಎಲ್ಲಗಾದರೂ ಕಳಿಸಿರಿ' ಎಂದು ಪೀಡಿಸತೊಡಗಿದೆ. ಕಡೆಗೆ ಅವರು ವಿಯನ್ನಾದಲ್ಲಿರುವ ತಮ್ಮ ದೂರದ ಸಮ್ಮಂಧಿಕರ ಕಡೆ ಕೆಲಸಕ್ಕಾಗಿ ಕಳಿಸಲು ಒಪ್ಪಿದರು.

"ಮೋಡ ಮುಸುಕಿದ ಆ ಸಂಜೆಯಂದು ವಿಯನ್ನಾ ಸ್ಟೇಶನದ ಮೇಲಿಳಿದಾಗ ಎಲ್ಲಿಗೆ ಹೋಗಬೇಕೆನ್ನುವ ವಿಚಾರ ಮೊದಲು ಅಂಕುರಿಸಿತೆನ್ನುವುದು ಕೂಡ ಹೇಳಬೇಕೆ ? ಸಾಮಾನುಗಳನ್ನೆಲ್ಲ ಸ್ಟೇಶನದ ಮೇಲೆಯೇ ಒಗೆದು ಟ್ರಾಮ್ ಹಿಡಿದೆ—ನಿಮ್ಮಲ್ಲಿಗೆ ಬರಲು. ಓ! ಟ್ರಾಮ್ ಕೂಡ ಎಷ್ಟು ಮಂದ

ಗತಿಯಿಂದ ಹೋಗುತ್ತಿತ್ತು! ಅದು ನಿಂತಾಗೊಮ್ಮೆ ನಾನು ಉರಿದೇಳುತ್ತಿದ್ದೆ. ಕೊನೆಗೆ ಮನೆ ಬಂದಿತು. ನಿಮ್ಮ ಕಿಟಕಿಯಿಂದ ಮಂದ ಬೆಳಕು ಹೊರಗೆ ಬರುತ್ತಿರುವದನ್ನು ಕಂಡು ಎದೆ ಹಾರತೊಡಗಿತು. ಅಪರಿಚಿತವಾದುದೆಲ್ಲವೂ ಸುಪರಿಚಿತವೆನ್ನಿಸತೊಡಗಿತು;—ನೀರಸತೆ ಮಾಯವಾಗಿ ಎಲ್ಲವೂ ರಸಮಯ ವಾಯಿತು. ನನ್ನ ಜೀವನದ ಚಿರ ನೂತನ ಸ್ವಪ್ನವಾದ ನೀವು ನನ್ನ ಬಳಿ ಯಲ್ಲಿಯೇ ಇದ್ದಿರಿ. ನನ್ನ ನಿಮ್ಮ ನಡುವೆ ಕೇವಲ ತೆಳುವಾದ ಹೊಳೆಯುವ ಗಾಜು ಅಷ್ಟೆ. ನಾನು ಉನ್ಮತ್ತಳಾದೆ. ಆ ತೆಳುವಾದ ಗಾಜು ದಾಟಲಾರದ ಭಯಂಕರ ಕೊರೆಯೆಂಬ ಕಟು ಸತ್ಯ ಕೂಡ ನನಗೆ ಹೊಳೆಯಲಿಲ್ಲ. ನಿಮ್ಮ ಸಾಮಿಪ್ಯ—ಅದೇ ನನಗೆ ಸಾಕಾಗಿತ್ತು.

"ಪ್ರತಿ ದಿನ ಕೆಲಸಮಾಡಿ ಆರು ಗಂಟೆಯ ಹೊತ್ತಿಗೆ ಅಲ್ಲಿಗೆ ಬರುವುದು ಅಭ್ಯಾಸವಾಗಿ ಬಿಟ್ಟಿತು. ನನಗೆ ನಿಮ್ಮನ್ನು ದೂರದಿಂದಾದರೂ ಸರಿ ಒಂದು ಸಲ ಕಾಣಬೇಕೆಂಬ ಹಂಬಲ ಬಲವಾಗಿ ಬೆಳೆಯತೊಡಗಿತ್ತು. ಒಂದು ವಾರದ ನಂತರ ಸಮಯ ಕೂಡಿ ಬಂತು. ನಾನು ಅಲ್ಲಿಯೇ ಕಾಯುತ್ತ ನಿಂತಿದ್ದೆ. ನೀವು ಅಲ್ಲಿಗೆ ಬಂದಿರಿ. ಕೆನ್ನೆ ಕೆಂಪಾದವು. ನೋಡುವ ಕುತೂಹಲ ಕೆಣಕುತ್ತಿದ್ದರೂ ಕಣ್ಣೆತ್ತದಾದೆ. ಕೆಳಗೆ ಹಾಕಿದ ಮುಖದಿಂದ ಹಾಗೆಯೇ ಓಡಿಬಿಟ್ಟೆ. 'ನಿಮ್ಮನ್ನು ನೋಡಬೇಕು. ನೀವು ನನ್ನನ್ನು ಗುರುತಿಸಬೇಕು, ಅದೇ ಪ್ರೇಮಲ ಭಾವದಿಂದ ಮಾತನಾಡಿಸಬೇಕು........" ಏನೇನೋ ಕಲ್ಪಿಸಿಕೊಂಡಿದ್ದೆ; ಆದರೂ ಅಲ್ಲಿ ನಿಲ್ಲುವದಾಗಲಿಲ್ಲ.

"ಬಹಳ ದಿನಗಳ ವರೆಗೆ ನಿಮ್ಮ ಲಕ್ಷ್ಯ ನನ್ನ ಕಡೆ ಹೊರಳಲೇ ಇಲ್ಲ. ಆದರೂ ನಾನು ನಿತ್ಯ ತಪ್ಪದೆ ಬರುತ್ತಿದ್ದೆ. ಚಳಿಯಿರಲಿ—ಮಳೆಯಿರಲಿ; ನಿಮ್ಮ ಕಿಟಕಿಯ ಪ್ರಕಾಶವನ್ನೇ ನೋಡುತ್ತ ಗಂಟೆಗಂಟೆಗಳ ವರೆಗೆ ನಿಲ್ಲುತ್ತಿದೆ. ಗೆಳೆಯರೊಡನೆ ನಗುತ್ತ—ಕೆಲೆಯುತ್ತ ನೀವು ಹೋಗುತ್ತಿದ್ದಿರಿ, ಒಂದು ಸಲ ನಿಮ್ಮನ್ನು ಒಬ್ಬ ತರುಣಿಯೊಡನೆ ಕಂಡೆ. ಈರ್ಷೆ ಮತ್ಸರ ಬೆಳೆದು ನಿಂತುವು. ನಿಮ್ಮನ್ನು ಮತ್ತೆ ಕಾಣಬಾರದೆಂದು ನಿರ್ಧರಿಸಿ ಮನೆಗೆ ಮರಳಿದೆ. ನನ್ನ ನಿರ್ಧಾರ ಒಂದು ದಿನವಾದರೂ ಪೂರ್ಣ ಸಿಲ್ಲಲಿಲ್ಲ. ನೀವಿಲ್ಲದೆ ಎಲ್ಲವೂ ಭಯಾನಕವೆನ್ನಿಸತೊಡಗಿತು. ಅಭಿಮಾನ ಮಣ್ಣು ಮುಕ್ಕಿತು. ನಾನು ಸೋತೆ. ಮತ್ತೆ ಮೊದಲಾಯಿತು—ಅದೇ ನಿರಂತರ ನಿರೀಕ್ಷಣೆ.!

"ಕೊನೆಗೊಮ್ಮೆ ಆ ಕ್ಷಣ ಒದಗಿ ಬಂತು. ನೀವು ದೂರದಲ್ಲಿ ಬರುತ್ತಿದ್ದಿರಿ. ಶಕ್ತಿಯೆಲ್ಲವನ್ನೂ ಕ್ರೋಢೀಕರಿಸಿ ನಿಮ್ಮ ಹಾದಿಯಲ್ಲಿ ನಿಂತೆ. ದುರ್ದೈವ—! ಹಾದಿಯೆಲ್ಲವೂ ವಾಹನಗಳಿಂದ ತುಂಬಿತ್ತು. ಅನಿವಾರ್ಯವಾಗಿ ನೀವು ನನ್ನ ಬಳಿಯಿಂದಲೇ ಹೋಗಬೇಕಾಯಿತು. ಅರಿಯದೆಯೆ ನಿಮ್ಮ ಕಣ್ಣುಗಳು ನನ್ನನ್ನು ನೋಡಿದವು. ನನ್ನ ಕಣ್ಣುಗಳಲ್ಲಿ ಕುಣಿಯುತ್ತಿದ್ದ ತಲ್ಲೀನತೆಯನ್ನು ನೀವು ಗುರುತಿಸದಿದ್ದರೂ ನಿಮ್ಮ ಮುಖದಲ್ಲಿ ತರುಣಿಯರನ್ನು ಕಂಡಾಗ ಉದ್ಭವಿಸುವ ಭಾವಗಳು ಸ್ಫುಟವಾಗಿ ಒಡಮೂಡಿದುವು ನನ್ನ ಮೈಯಲ್ಲಿ ವಿದ್ಯುತ್ ಸಂಚಾರವಾಯಿತು ಓ! ಆ ನೋಟ ಎಷ್ಟು ಮೋಹಕ! ಎಲ್ಲ ಆವರಣವನ್ನು ತೂರಿ ಅಪ್ಪಿಕೊಳ್ಳಲು ಹಾತೊರೆಯುವಂತೆ ಮಾಡುವ ನೋಟ ಅದು! ಇದೇ ನೋಟ ವರುಷಗಳ ಹಿಂದೆ ಈ ಬಾಲಿಕೆಯ ಹೃದಯದಲ್ಲಿ ಪ್ರೇಮ ಜ್ವಾಲೆಯನ್ನು ಹೊತ್ತಿಸಿತ್ತು. ಎರಡು ನಿಮಿಷಗಳವರೆಗೆ ನೀವು ನನ್ನನ್ನೇ ನೋಡುತ್ತಿದ್ದಿರಿ. ನನ್ನಿಂದ ಕೂಡ ನೋಟ ಕಿತ್ತುವುದಾಗಲಿಲ್ಲ. ನೀವು ಹೋದಿರಿ. ನನ್ನದೆಲ್ಲವೂ ಹೋದಂತಾಯಿತು. ಸಾವಕಾಶ ಹೆಜ್ಜೆ ಹಾಕತೊಡಗಿದೆ. ಕೆಲವು ಹೆಜ್ಜೆಗಳ ನಂತರ ತಿರುಗಿ ನೋಡಿದಾಗ ನೀವು ನನ್ನನ್ನೇ ನೋಡುತ್ತಿದ್ದಿರಿ. ನಿಮ್ಮ ಕಣ್ಣುಗಳಲ್ಲಿ ಜಿಜ್ಞಾಸೆ ಇತ್ತು. ಪರಿಚಯದ ಭಾವವಿರಲಿಲ್ಲ. ನೀವು ನನ್ನನ್ನು ಗುರುತಿಸಲಿಲ್ಲ ಮುಂದೆಯೂ ಗುರುತಿಸಲಿಲ್ಲ. ಅಂದಾದ ನಿರಾಶೆ ಎಷ್ಟೆಂದು ಹೇಳಲಿ? ಜೀವನದಲ್ಲಿ ಮೊದಲನೆ ಸಲ ನಿರಾಶೆಯ ಅನುಭವವಾಯಿತು. ಅಪರಿಚಿತಳಾಗಿ ನಾನು ಸಾಯಬೇಕೆ? ಎಂದು ಕೊರಗಿದೆ. ತಂದೆಯ ಮನೆಯಲ್ಲಿದ್ದಾಗ ಈ ಎರಡನೆಯ ಭೆಟ್ಟಿಯ ಕ್ಷಣವನ್ನೇ ಚಿತ್ರಿಸುತ್ತಿದ್ದೆ. ಕನಸಿನ ಸುಂದರ ಮಂದಿರಗಳನ್ನು ಸೃಜಿಸುತ್ತಿದ್ದೆ. ತರತರದ ವಿಚಾರ ಮೂಡಿ ಮಾಯವಾಗುತ್ತಿದ್ದವು—ಕೆಲವು ಮಧುರ, ಕೆಲವು ಮಾದಕ.—ಕೆಲವು ದುರ್ದಾಂತ. ಆದರೆ ಏನೆಂದರೂ ನೀವು ಆ ಹದಿಮೂರು ವರುಷದ ಹುಡುಗೆಯನ್ನು ಮರೆಯಬಹುದೆಂದೆನ್ನಿಸಿರಲಿಲ್ಲ. ಆ ಸಂಜೆ ನಡೆದ ಘಟನೆ ನನಗೆ ಜೀವನದಲ್ಲಿ ಒಂದು ಹೊಸ ಪಾಠವನ್ನು ಕಲಿಸಿಕೊಟ್ಟಿತು. ನಿಮ್ಮ ಜೀವನದೊಡನೆ ಸಂಬಂಧ ಬೆಳೆಸಲು ಯಾವ ಸೂತ್ರವೂ ಇಲ್ಲವೆಂಬ ಅನುಭವವನ್ನು ಮಾಡಿಕೊಟ್ಟಿತು.

"ನೀವು ನನ್ನನ್ನು ಗುರುತಿಸಲಿಲ್ಲ ಎರಡು ದಿನಗಳ ನಂತರ ಮತ್ತೊಮ್ಮೆ ಭೆಟ್ಟಿಯಾದಾಗ ಪರಿಚಿತರಂತೆ ನೋಡಿದಿರಿ. ಆದರೆ ಇದರಲ್ಲಿ ವರ್ಷಗಳಿಂದ ನಿಮ್ಮ ಮೂರ್ತಿಯನ್ನೇ ಆರಾಧಿಸುತ್ತಿದ್ದ ಆ ಹುಡುಗಿಯ ಪರಿಚಯವಿರ ಲಿಲ್ಲ—ಹದಿನೆಂಟು ವರುಷದ ತುರುಣಿಯು ಪರಿಚಯದ ನೋಟವಿದ್ದಿತು. ಮೆಲುನಗೆ ನಗುತ್ತ ಬಳಿಯಿಂದ ಹಾದು ಹೋಗುವಾಗ ನಿಮ್ಮ ಗತಿ ಸಾವ ಕಾಶವಾಗಿತ್ತು. ನನ್ನಲ್ಲಿ ಇಲ್ಲದ ಆಸೆಗಳೇಳುತ್ತಿದ್ದವು. ನೀವು ನನ್ನನ್ನು ಮಾತನಾಡಿಸುವಿರೆಂದು ತಿಳಿಯದೆ ಮೊದಲನೆಯ ಸಲ ನಿಮ್ಮ ದೃಷ್ಟಿಯಲ್ಲಿ ನನಗೆ ಅಸ್ತಿತ್ವದೊರೆತಂತೆನಿಸಿತು. ನಿಮ್ಮ ಮಾತಿಗಾಗಿ ನಾನು ಉತ್ಕಂಠಿತ ಳಾದೆ. ನೀವು ಮಾತನಾಡಿಸಿದಿರಿ. ನಿಮ್ಮ ಪ್ರೇಮಲ ಮಾತಿನಿಂದ ನನ್ನ ಸಂಕೋಚವೆಲ್ಲವೂ ದೂರವಾಯಿತು. ಸರಳತೆಯಿಂದ ಉತ್ತರಿಸತೊಡಗಿದೆ. ಹಾದಿಯ ಕೊನೆಯವರೆಗೆ ನೀವು ನನ್ನ ಜೊತೆಗೆ ಬಂದಿರಿ. ನೀವು ನನಗೆ ಊಟದ ಆಮಂತ್ರಣವಿತ್ತಾಗ ಒಪ್ಪಿಯೇ ಬಿಟ್ಟೆ. ಒಪ್ಪದಿರಲು ಕಾರಣ ವಾದರೂ ಏನು ?

"ಸಂಣದೊಂದು ಹೋಟೆಲಿನಲ್ಲಿ ನಾವಿಬ್ಬರೂ ಊಟ ಮುಗಿಸಿದೆವು. ಆ ಹೋಟೆಲಿನ ನೆನಪು ಕೂಡ ಎಂದೋ ಅಳಿಸಿ ಹೋಗಿರಬೇಕು. ನಿಮ್ಮ ನೆನಪಿನಲ್ಲಿ ಉಳಿಯಲು ಆ ದಿನ ಜರುಗದ ಘಟನೆಯಾದರೂ ಯಾವುದು ? ನನ್ನಿಂದ ಆ ದಿನ ಏನೂ ಮಾತನಾಡುವುದಾಗಿರಲಿಲ್ಲ. ನೀವು ನನ್ನ ಬಳಿಯ ಲ್ಲಿದ್ದಿರಿ. ನಿಮ್ಮ ಮಾತುಗಳನ್ನು ಕೇಳುವುದೇ ನನಗೆ ಪರಮ ಪ್ರಸಾದ ವಾಗಿತ್ತು. ನನ್ನ ವ್ಯರ್ಥ ಮಾತುಗಳಲ್ಲಿ ಒಂದು ಕ್ಷಣವೂ ಕೂಡ ಕಳೆಯು ವುದು ನನಗೆ ಬೇಕಾಗಿರಲಿಲ್ಲ. ನೀವು ಆಗ ನನಗೆ ತೋರಿದ ಗೌರವ, ವಿಶ್ವಾಸ ನಾನೆಂದೂ ಮರೆಯಲಾರೆ. ನಿಮ್ಮ ನಡೆಯಲ್ಲಿ, ನುಡಿಯಲ್ಲಿ ಉದ್ವೇ ಗದ ಯಾವ ಚಿನ್ಹವೂ ಇರಲಿಲ್ಲ. ಐದು ವರುಷದ ಕನಸುಗಳೆಲ್ಲವೂ ಅಂದು ಸಾಕಾರತೆಗಿಳಿಯತೊಡಗಿದ್ದವು. ರಾತ್ರಿ ಸಾವಕಾಶವಾಗಿ ಜಾರತೊಡಗಿತ್ತು. ನಾವಿಬ್ಬರೂ ಹೋಟೆಲಿನಿಂದ ಹೊರಬಿದ್ದೆವು. ಸ್ವಲ್ಪ ದೂರ ಹೋದನಂತರ ನೀವು ಕೇಳಿದಿರಿ ನನಗೆ ಅವಸರವಿದೆಯೇ? ಎಂದು. ನನಗೆಲ್ಲಿಯ ಅವಸರ. ಇಲ್ಲವೆಂದು ತಲೆಯಲ್ಲಾಡಿಸಿದೆ. ಮೌನದಲ್ಲಿ ಮತ್ತೆ ಸ್ವಲ್ಪ ಹಾದಿ ಕಳೆಯಿತು. ಬೇಕೋ—ಬಾರದೋ ಎಂದು ಅಳಕುತ್ತ ನೀವು ಕೇಳಿದಿರಿ.

'ಒಂದೆರಡು ಕ್ಷಣ ನನ್ನ ಕೋಣೆಯಲ್ಲಿ ಹರಟೆ ಕೊಚ್ಚಲಾರಿರಾ?'

'ಸಂತೋಷದಿಂದ' ಎಂದೆ.

"ನನ್ನ ಭಾವನೆಗಳನ್ನು ನಾನು ಹಿಡಿತದಲ್ಲಿಡದಾದೆ. ನನ್ನ ತೀವ್ರ ಒಪ್ಪಿಗೆಯನ್ನು ಕಂಡು ನೀವು ಚಕಿತರಾದಿರಿ. ಅದರ ಅರ್ಥ ಆ ದಿನ ನನಗೆ ಹೊಳೆಯಲಿಲ್ಲ. ಇಂದು ತಿಳಿದಿದೆ. ಸ್ತ್ರೀಯಾದವಳಲ್ಲಿ ಆ ತೀವ್ರತೆ—ಆ ಉತ್ಸುಕತೆ ಇರಕೂಡದು. ತನಗೆ ಬೇಕಾದವನಾದರೂ ಕೂಡ ಶಂಕೆ—ಭೀತಿಗಳನ್ನು ತೋರ್ಪಡಿಸದೆ, ಆಣೆ ಪ್ರಮಾಣಗಳನ್ನು ತಕ್ಕೊಳ್ಳದೆ ಒಪ್ಪ ಕೂಡದು. ಆದರೆ ಆ ನನ್ನ ಶೀಘ್ರ ಒಪ್ಪಿಗೆ ಎಷ್ಟೋ ದಿನಗಳಿಂದ ಎದೆಯಲ್ಲಿ ತಾಂಡವವಾಡುತ್ತಿದ್ದ ಆಶೆಗಳ ಪ್ರತಿರೂಪವೆಂದು ನಿಮಗೆ ಹೇಗೆ ಗೊತ್ತಾಗ ಬೇಕು?

"ಏನೇ ಆದರೂ ನನ್ನ ವರ್ತನೆ ನಿಮಗೆ ಆಕರ್ಷಿತವಾಯಿತು. ನಾನು ನಿಮ್ಮ ಪಾಲಿಗೆ ವಿಚಿತ್ರ ಹುಡುಗಿಯಾದೆ. ನಾವಿಬ್ಬರೂ ಕೂಡಿ ಹೋಗತೊಡಗಿದ್ದೆವು. ಅನುಭವ ಮತ್ತು ಕಲ್ಪನೆಗಳ ಬಲದಿಂದ ನೀವು ನನ್ನಲ್ಲಿ ಏನೋ ವಿಶೇಷವನ್ನು ಕಂಡಂತೆ ತೋರಿತು. ನನ್ನ ಎದೆಯ ಆಳದಲ್ಲಿ ಏನೋ ಗೌಪ್ಯವಿದೆ ಎಂದುಕೊಂಡಿರಿ. ನಿಮ್ಮ ಕುತೂಹಲ ಕೆರಳಿ ನಿಂತಿತು. ನೀವು ಕೇಳುವ ಪ್ರಶ್ನೆಗಳಿಂದ ನೋಡುವ ರೀತಿಯಿಂದ ನೀವು ಆ ಆಳವನ್ನು ಹುಡುಕಲು ಯತ್ನಿಸುತ್ತಿರುವಂತೆ ಕಂಡಿತು. ನಾನು ಅರ್ಧಮರ್ಧವಾಗಿ—ನಿಮ್ಮ ಕಡೆಗೆ ನೋಡದೆ ಎಚ್ಚರಿಕೆಯಿಂದ ಉತ್ತರಿಸುತ್ತಿದ್ದೆ. ಅರ್ಧ ಉತ್ತರ ಗಳಿಂದ ನೀವು ನನಗೆ ಹುಚ್ಚು ಹುಡುಗಿ ಎಂದರೂ ಅಡ್ಡಿ ಇರಲಿಲ್ಲ. ನನ್ನ ಗುಟ್ಟು ಹೊರಬೀಳುವದಕ್ಕಿಂತ ಈ ಬಹುಮಾನ ಎಷ್ಟೋ ವಾಸಿ ಎನ್ನಿಸಿತ್ತು.

"ನಾವಿಬ್ಬರೂ ಮನೆ ಮುಟ್ಟಿದೆವು. ನಿಮ್ಮ ಜೊತೆಗೂಡಿ ಆ ಮೆಟ್ಟಲು ಗಳನ್ನೇರುವಾಗ ನಾನು ಆನಂದದಿಂದ ಹುಚ್ಚಳಾದೆ. ಉನ್ಮಾದದ ಅತಿರೇಕ ದಿಂದ ಶ್ವಾಸ ತೀವ್ರವಾಗಿ ನಡೆಯತೊಡಗಿತ್ತು. ಆ ಕ್ಷಣ ನೆನೆಸಿಕೊಂಡಾಗ ಇನ್ನೂ ಕಣ್ಣಲ್ಲಿ ನೀರೂರುತ್ತವೆ. ಮನೆಯ ಪ್ರತಿಯೊಂದು ವಸ್ತುವಿನಲ್ಲಿ ನನ್ನ ಲಾಲಸೆಗಳಡಗಿದ್ದವು. ಪ್ರತಿಯೊಂದು ಪದಾರ್ಥವು ನನ್ನ ಬಾಲ್ಯದ ಕಾಮನೆಗಳ ಪ್ರತೀಕವಾಗಿದ್ದಿತು. ಅದೇ ಬಾಗಿಲು—ಅದೇ ಮೆಟ್ಟಲು. ಅವೇ ಸಾಮಾನುಗಳು. ಎಲ್ಲವೂ ಅದೇ ರೀತಿಯಾಗಿ. ಅದೇ ಸ್ಥಳ ನಾನು

ನಿಮ್ಮನ್ನು ನೋಡಿದ್ದು. ನನ್ನ ಭಾವನೆಗಳೆಲ್ಲವೂ ಆ ಕೆಲ ಹೆಜ್ಜೆಯ ಸ್ಥಳದಲ್ಲಿ ಮನೆ ಮಾಡಿಕೊಂಡಿದ್ದವು. ನಿಮ್ಮ ಕೋಣೆ ಅಪರಿಚಿತವೆನ್ನಿಸಲಿಲ್ಲ. ನನ್ನ ಈ ಮಾತು ನಿಮಗೆ ಕೀಳೆನ್ನಿಸಬಹುದು—ಆದರೆ ಏನು ಮಾಡಲಿ? ನಿಮ್ಮ ಮನೆಯ ಬಾಗಿಲಿನಿಂದಲೇ ನನ್ನ ಜೀವನ ಪ್ರಾರಂಭವಾಗಿತ್ತು. ಅದು ನನ್ನ ಸ್ವರ್ಗದ ಬಾಗಿಲು! ಕುತೂಹಲದ ನಯನಗಳನ್ನು ಅದರ ಮೇಲೆ ಇಟ್ಟದ್ದು ಎಷ್ಟೋ ಸಲ! ನನ್ನ ಬಯಕೆಗಳೆಲ್ಲ ನನ್ನ ಬಟ್ಟಲಲ್ಲಿ ಬೀಳ ತೊಡಗಿದ್ದವು. ನೀವೆಂತು ತಿಳಿಯ ಬಲ್ಲಿರಿ ಅದನ್ನು!

"ರಾತ್ರಿಯೆಲ್ಲವೂ ನಿಮ್ಮ ಬಳಿಯಲ್ಲಿಯೇ ಇದ್ದೆ. ಮೊದಲು ನನ್ನ ಶರೀರವನ್ನು ಯಾವ ಪುರುಷನೂ ಮುಟ್ಟುವದಂತೂ ಇರಲಿ ನೋಡಿರಲಿಲ್ಲ ಕೂಡ. ನನ್ನ ಲಜ್ಜೆ ಪ್ರತಿರೋಧ ಯಾವುದೂ ಕಾಣದಿರುವಾಗ ನಿಮಗೆ ಆ ವಿಚಾರ ಹೊಳೆಯುವದಾದರೂ ಹೇಗೆ? ನಾನು ನಾಚಿಕೆ ತೋರಬೇಕಾಗಿತ್ತು. ಪ್ರತಿಭಟನೆಯ ಭಾವವನ್ನು ಮೂಡಿಸಬೇಕಾಗಿತ್ತು. ಅಂದರೆ ನಿಮಗೂ ನಂಬಿಗೆಯಾಗುತ್ತಿತ್ತು. ಆದರೆ ಈ ನಟನೆಯಿಂದ ನೀವು ನನ್ನಿಂದ ದೂರ ಹೋದರೆ.... .... ....? ಆ ವಿಚಾರವೇ ಅಸಹ್ಯವಾಗಿತ್ತು. ಅಂದು ನನ್ನ ಕೌಮಾರ್ಯವನ್ನು ನಿಮ್ಮ ಚರಣಗಳಲ್ಲರ್ಪಿಸಿದೆ. ನೀವು ನನ್ನನ್ನು ಬಲಾತ್ಕರಿಸಲಿಲ್ಲ. ಸವಿಮಾತಿನ ಮೋಹಕ ಜಾಲದಲ್ಲಿ ನೀವು ನನ್ನನ್ನು ಸೆಳೆಯಲಿಲ್ಲ. ನನ್ನಷ್ಟಕ್ಕೆ ನಾನೇ ನಿಮ್ಮ ತೋಳ ತೆಕ್ಕೆಯಲ್ಲಿ ಬಿದ್ದು ನನ್ನ ಭಾಗ್ಯದ ಪಣ ಒಡ್ಡಿದ್ದೆ. ಆ ರಾತ್ರಿ ನನಗೆ ಸ್ವರ್ಗೀಯ ರಾತ್ರಿಯಾಗಿತ್ತು. ಅದಕ್ಕಾಗಿ ನನಗೆ ಮುಂದೆಂದೂ ಪಶ್ಚಾತ್ತಾಪವಾಗಲಿಲ್ಲ.

"ನಾನು ನಸುಕಿನಲ್ಲಿಯೇ ಹೊರಟು ಬಿಟ್ಟೆ. ಮನೆಗೆ ಹೋಗಬೇಕಾಗಿತ್ತು. ಅಲ್ಲದೆ ನಿಮ್ಮ ಆಳಿನ ಕಣ್ಣಿಗೆ ಬೀಳುವುದೂ ನನಗೆ ಬೇಕಾಗಿರಲಿಲ್ಲ. ಹೊರಟು ನಿಂತಾಗ ನನ್ನನ್ನಪ್ಪಿಕೊಂಡು ಎಷ್ಟೋ ಹೊತ್ತಿನವರೆಗೆ ನನ್ನನ್ನೇ ನೋಡುತ್ತ ನಿಂತಿರಿ. ಮನಸ್ಸಿನ ಪ್ರಸನ್ನತೆಯಲ್ಲಿ ಆಗ ನಾನು ನಿಮಗೆ ಅಸಾಧಾರಣಸುಂದರಿಯಾಗಿ ಕಂಡಿರಬೇಕು. ಮೆಲ್ಲನೆ ನನ್ನ ತುಟಿಗೆ ತುಟಿಯನ್ನೊತ್ತಿದಿರಿ. ಬೆಳಕು ಹರಿಯತೊಡಗಿತ್ತು. ನಾನು ಮುಂದೆ ಹೆಜ್ಜೆಯಿಟ್ಟೆ. ನೀವೇನೋ ವಿಚಾರದಲ್ಲಿ ತಿರುಗಿ ನೋಡಿದಿರಿ. ಮೇಜಿನ ಮೇಲೆ ನಾಲ್ಕು ಗುಲಾಬಿ ನಗುತ್ತಿದ್ದವು. ನಿಮ್ಮ ಪ್ರೇಮದ ಕಾಣಿಕೆಯಾಗಿ ನನಗರ್ಪಿಸಿದಿರಿ.

ಆ ದಿವಸದನಂತರ ಎಷ್ಟೋ ದಿನಗಳವರೆಗೆ, ಬಾಡಿದ್ದರೂ ಕೂಡ ಅವುಗಳನ್ನು ನಾನು ಹೊರಗೆ ಒಗೆಯಲಿಲ್ಲ. ”

‘‘ ನಾವು ಎರಡನೆ ರಾತ್ರಿ ಕೂಡಬೇಕಾಗಿ ಮಾತಾಗಿತ್ತು. ಅದೇ ಆನಂದ–ಅದೇ ಉತ್ಸಾಹ–ಅದೇ ಉನ್ಮಾದ. ಮೂರನೆಯ ರಾತ್ರಿ. ಆಗಲೂ ನಾವು ಕೂಡಿಯೇ ಇದ್ದೆವು. ನಿಮಗೆ ಕೆಲವು ದಿವಸಗಳ ವರೆಗೆ ಹೊರಗೆ ಹೋಗಬೇಕಾಗಿದೆಯೆಂದು ಅಂದು ಹೇಳಿದಿರಿ. ನನ್ನ ಎದೆಯಲ್ಲಿ ಬೆಂಕಿ ಇಟ್ಟಂತೆ ಆಯಿತು ನೀವು ದೂರಹೋಗುವ ವಿಚಾರವೇ ನನ್ನ ಪಾಲಿಗೆ ಸಾವಿನ ಸಮಾನವಾಗಿತ್ತು. ಎದೆಯಲ್ಲಿ ಕೋಲಾಹಲವೆದ್ದಿತು. ಏನೂ ಹೇಳದಾಗದೆ ಮುಖ ಕೆಳಗೆ ಹಾಕಿದೆ. ನೀವು ಎಷ್ಟೋ ಹೇಳಿದಿರಿ. ಸಾವಿರ ರೀತಿಯಿಂದ ಸಂತೈಸಿದಿರಿ. ಮರಳಿ ಬಂದ ಮರುಕ್ಷಣವೇ ತಿಳಿಸುವುದಾಗಿ ವಚನ ಕೊಟ್ಟಿರಿ. ನಾನು ಹೂಗುಟ್ಟಿದೆ.

“ಅದಾದ ನಂತರ ಎರಡು ತಿಂಗಳ ವರೆಗೆ ನಿಮ್ಮಿಂದ ಯಾವ ಸಮಾಚಾರವೂ ತಿಳಿಯಲೇ ಇಲ್ಲ!—ಆ ದೀರ್ಘವಾದ ಎರಡು ತಿಂಗಳ ವರೆಗೆ ಆಶೆ ನಿರಾಶೆಯ ತಿಕ್ಕಾಟದಲ್ಲಿ ಪ್ರತಿದಿನ ಉರುಳುತ್ತಿತ್ತು—ಸಂಜೆಯ ಸೂರ್ಯನ ಜೊತೆಗೆ ಆಶೆಯ ಕಿರಣಗಳೂ ಕಡಿಯುತ್ತಿದ್ದವು. ರಾತ್ರಿಯೆಲ್ಲವೂ ತಳಮಳದಿಂದ ಹಾಸಿಗೆಯಲ್ಲಿ ಹೊರಳಾಡುತ್ತಿದ್ದೆ. ನಿಮಗಾಗಿ ಆರೋಪವಿರಲಿಲ್ಲ—ಪ್ರೀತಿಯಿತ್ತು. ನಿಮ್ಮ ವ್ಯಕ್ತಿತ್ವವೇ ಅಂತಹದಿತ್ತು ಎರಡು ತದ್ವಿರುದ್ಧ ಗುಣಗಳು ಕೂಡಿಕೊಂಡು ಹೋಗುತ್ತಿದ್ದುವು ನಿಮ್ಮಲ್ಲಿ. ನಿಮ್ಮ ಕಿಟಕಿಯ ಬೆಳಕಿನಿಂದ ನೀವು ಬಂದದ್ದು ತಿಳಿಯಿತು. ಆದರೆ ನೀವು ನನಗೆ ಬರೆಯಲಿಲ್ಲ. ಹಗಲಿರುಳು ಅದರ ನಿರೀಕ್ಷಣೆಯಲ್ಲಿಯೇ ಇರುತ್ತಿದ್ದೆ. ಇೀಗ ಇಷ್ಟರಲ್ಲಿ ನಿಮ್ಮ ಕರೆ ಬರಬಹುದೆಂದು ಸದಾ ಆತುರದಿಂದ ಕಾಯುತ್ತಿದ್ದೆ. ನೀವು ಬರಲಿಲ್ಲ—ಬರೆಯಲಿಲ್ಲ; ಒಂದು ಶಬ್ದವನ್ನೂ ಕೂಡ ಬರೆಯಲಿಲ್ಲ. ಜೀವನದ ಕೊನೆ ಗಳಿಗೆಯಲ್ಲಿ ನಿಮ್ಮ ಬರೆಹದ ಒಂದು ಪಂಕ್ತಿಯೂ ಇಲ್ಲದೆ ಕಣ್ಣು ಮುಚ್ಚತೊಡಗಿದ್ದೇನೆ, ಇಂದು

“ನಿನ್ನೆ ತೀರಿದ ಮಗು ನಿಮ್ಮದೇ! ಆ ಮೂರು ರಾತ್ರಿಗಳ ನಿಸರ್ಗದಾನವದು. ನನ್ನ ಜಾಗೃತ ಪ್ರೇಮ—ನಿಮ್ಮ ಅಲಕ್ಷತೆಯ ಮಿಲನದಿಂದ ಹುಟ್ಟಿದ ಕೋಮಲ ಹೂ—ನಮ್ಮ ಮಗು; ನಮ್ಮ ಏಕ ಮಾತ್ರ ಸಂತಾನ

ಹಾರಿ ಬೀಳ ಬೇಡಿರಿ. ಇಷ್ಟು ದಿನಗಳ ಗೌಪ್ಯವನ್ನು ಸಾಯುವಾಗ ಹೊರ ಗೇಕೆ ಹಾಕುತ್ತಾಳೆಂದು ಬೆರಗಾಗಬೇಡಿರಿ. ನನ್ನಲ್ಲಿ ಯಾವ ಆಶೆಯೂ ಇಲ್ಲ. ನಾನು ನಿಮಗೆ ಅಪರಿಚಿತೆ. ನಿಮ್ಮೊಡನೆ ಮೂರು ರಾತ್ರಿ ಕಳೆಯಲು ಉತ್ಸುಕಳಾದ ಸ್ವೇಚ್ಛಾಹಾರಿ ತರುಣಿ ಅಷ್ಟೆ. ದೈವದ ಆ ಆಟದಲ್ಲಿ ನಾನಿಮ್ಮ ಜೊತೆಗಾತಿ ಎಂದು ಹೇಳಿದ್ದರೆ ನೀವೆಂದೂ ವಿಶ್ವಾಸವಿಡುತ್ತಿರಲಿಲ್ಲ ಶಂಕಾ ರಹಿತವಾದ ಮನಸ್ಸಿನಿಂದ ನೀವೆಂದೂ ಮಗುವನ್ನು ನಿಮ್ಮದೆನ್ನುತ್ತಿರಲಿಲ್ಲ. ನೀವು ನನಗಾಗಿ ಒಪ್ಪಿದರೂ ಕೂಡ—'ಮತ್ತಾರದೋ ಅನ್ಯಾಯದ ಹೊರೆ ನಾನು ಹೊರುತ್ತಿದ್ದೇನೆ' ಎಂಬ ವಿಚಾರದಿಂದ ನೀವು ಮುಕ್ತರಾಗುತ್ತಿರಲಿಲ್ಲ. ಆ ಮಗು ನನ್ನ ನಿಮ್ಮ ನಡುವೆ ಗುಡ್ಡದಂತೆ ನಿಲ್ಲುತ್ತಿತ್ತು. ಅವಿಶ್ವಾಸದಿಂದ ನೀವು ನನ್ನನ್ನು ನೋಡುತ್ತಿದ್ದಿರಿ. ಅದು ನನಗೆ ಅಸಹನೀಯವಾಗುತ್ತಿತ್ತು. ಎಂಥ ಕಷ್ಟಗಳಿಗೂ ನಾನು ನಿಮ್ಮ ಕಣ್ಣಲ್ಲಿ ಅವಿಶ್ವಾಸಿಯಾಗುವುದು ಬೇಕಾ ಗಿರಲಿಲ್ಲ. ನಿಮ್ಮ ಸ್ವಚ್ಛಂದತೆಗೆ ನಾನು ಯಾವ ರೀತಿಯಿಂದಲೂ ಅಡ್ಡಿ ಯಾಗಬಾರದೆಂದು ಮಾಡಿದ್ದೆ. ನಿಮಗೆ ಪರಿಚಿತರಾದ ಎಲ್ಲ ಸ್ತ್ರೀಯರಿ ಗಿಂತಲೂ ನಾನು ಬೇರೆ ಎನ್ನಿಸಿಕೊಳ್ಳಬೇಕೆಂಬ ಹಂಬಲವಿತ್ತು ನನಗೆ ಮುಂದೆ ಎಂದಾದರೂ ನನ್ನ ನೆನಪು ಬಂದಾಗ ಕೃತಜ್ಞತೆಯಿಂದ ನೀವು ನನ್ನನ್ನು ನೆನೆಸಿಕೊಳ್ಳಬೇಕು ಎನ್ನುವ ಆಶೆಯಿತ್ತು. ಆದರೆ ನಿಮಗೆಂದೂ ನನ್ನ ನೆನಪು ಬಂದಿರಲಾರದು. ನೀವು ನನ್ನನ್ನು ಸಂಪೂರ್ಣ ಮರೆತಿರಬೇಕು.

"ನಿಮ್ಮನ್ನು ನಾನು ದೂರುವದಿಲ್ಲ. ನಂಬಿರಿ. ಇದರಲ್ಲಿ ವ್ಯಂಗ್ಯದ ಸುಳಿವೇನಾದರು ನಿಮಗೆ ಕಾಣುತ್ತಿದ್ದರೆ ಕ್ಷಮಿಸಿರಿ. ನೀವು ನನ್ನನ್ನು ಕ್ಷಮಿಸಲೇಬೇಕು. ಮಗು ನಡುಗುತ್ತಿರುವ ಮೇಣ ಬತ್ತಿಯ ಬೆಳಕಿನಲ್ಲಿ ನಿಶ್ಚೇಷ್ಟಿತವಾಗಿ ಬಿದ್ದಿದೆ. ಅದನ್ನು ಆ ಕೊಲೆಗಡಕ ದೇವನ ಭರವಸೆಯಲ್ಲಿ ಬಿಡಲಾರೆ. ಅವನಲ್ಲಿ ನನಗೆ ಯಾವ ವಿಶ್ವಾಸವೂ ಇಲ್ಲ........ನೀವು ಕ್ಷಮಿ ಸುವಿರಿ. ನಿಶ್ಚಯವಾಗಿಯೂ ಕ್ಷಮಿಸುವಿರಿ ಎಂದು ನಂಬಿದ್ದೇನೆ. ನಿಮ್ಮ ಅಂತಃಕರಣ ನನಗೆ ಗೊತ್ತು. ನಿಮ್ಮ ದಯೆದುಂಬಿದ ಹೃದಯವನ್ನು ನಾನು ಬಲ್ಲೆ—; ನಿಮ್ಮ ದಯೆಯಲ್ಲಿ ಹುದುಗಿರುವ ಶಿಥಿಲತೆಯನ್ನೂ ನಾನು ಬಲ್ಲೆ. ನೀವು ಸಹಾಯ ಮಾಡುತ್ತಿದ್ದಿರಿ—ಆದರೆ ಸಹಾಯ ಮಾಡಬೇಕು ಎಂಬ ಏಕ ಮಾತ್ರ ಪ್ರಸನ್ನತೆಯಿಂದಲ್ಲ. ದುಃಖಿ—ದೀನರಿಗಿಂತ ನೀವು ಸುಖಿ

ಗಳನ್ನು ಹೆಚ್ಚು ಪ್ರೀತಿಸುತ್ತಿದ್ದಿರಿ. ನಿಮ್ಮ ಕೊಡುಗೆಯಲ್ಲಿ ಬೇಡುವವರು ತೀವ್ರವೇ ಕಣ್ಮರೆಯಾಗಲೆಂಬ ಅಭಿಲಾಷೆ ಇರುತ್ತಿತ್ತು. ಇದನ್ನು ನಾನು ಸಣ್ಣವಳಿರುವಾಗಲೇ ನಡೆದ ಒಂದು ಘಟನೆಯಿಂದ ಕಂಡುಕೊಂಡಿದ್ದೆನೆ. ಆದ್ದರಿಂದಲೇ ನನ್ನ ಕಷ್ಟಗಳಲ್ಲಿ ನಿಮ್ಮೆದುರು ಕೈಯೊಡ್ಡಲಿಲ್ಲ. ನನ್ನ ಕಷ್ಟ ಗಳ ಹೊರೆ ಹೊತ್ತುಕೊಂಡು ನಾನು ನಿಮ್ಮಲ್ಲಿ ಬಂದಿದ್ದರೆ ನೀವು ನನ್ನ ಕೂಸಿನಿಂದ ಬಿಡುಗಡೆ ಹೊಂದುವ ಉಪಾಯವನ್ನು ಸೂಚಿಸಬಹುದಾಗಿತ್ತು. ನನಗದೇ ಅಂಜಿಕೆಯಿತ್ತು. ನಾನು ಒಪ್ಪಿ ಬಿಡುತ್ತಿದ್ದೆ. ನಿಮ್ಮನ್ನು ಪ್ರತಿ ರೋಧಿಸುವ ಶಕ್ತಿಯೇ ನನ್ನಲ್ಲಿರಲಿಲ್ಲ. ಮಗು ನಿಮ್ಮ ಪ್ರತಿರೂಪವಾಗಿತ್ತು. ನನ್ನ ಸರ್ವಸ್ವವಾಗಿತ್ತು ನನ್ನ ರಕ್ತಮಾಂಸಗಳಿಂದ ಅದನ್ನು ಸೃಜಿಸಿದ್ದೆ. ಅದರ ರೂಪದಲ್ಲಿ ನಿಮ್ಮನ್ನು ಸಲಹುತ್ತಿದ್ದೆ. ಪ್ರೀತಿಸುತ್ತಿದ್ದೆ. ಚುಂಬಿಸು ತ್ತಿದ್ದೆ ಎಂತಲೇ ನನ್ನ ತಿಳುವಳಿಕೆ. ನಿಮ್ಮಿಂದ ಗರ್ಭ ನಿಂತಾಗ ಅತಿಶಯ ಆನಂದವಾಯಿತು. ಅಂತೆಯೇ ನಿಮ್ಮಿಂದ ಎಲ್ಲವನ್ನೂ ಮುಚ್ಚಿಟ್ಟೆ. ಆಗ ನೀವು ನನ್ನವರಾಗಿದ್ದಿರಿ. ನನ್ನಲ್ಲಿ ಆನಂದವಿತ್ತು.

"ಆದರೆ ಆ ದಿನಗಳು ಕಲ್ಪಿಸಿದಷ್ಟು ಸುಖದಾಯಕವಾಗಲಿಲ್ಲ. ಕೆಲವು ದಿವಸ ಕೆಲಸದಿಂದ ದೂರ ನಿಂತೆ. ಹೆಚ್ಚಿಗೆ ಯಾರ ಕಣ್ಣಿಗೂ ಬೀಳುವ ಗೋಜಿಗೆ ಹೋಗುತ್ತಿರಲಿಲ್ಲ. ಎಲ್ಲಿಯಾದರೂ ತಂದೆಗೆ ಸುದ್ದಿ ತಿಳಿದೀತೆಂಬ ಹೆದರಿಕೆಯಿತ್ತು. ಕೈಲಿದ್ದ ಕಾಸು ಕರಗುತ್ತ ಬಂತು. ದುಡಿತವಿಲ್ಲ–ಆದಾಯ ವಿಲ್ಲ ಅಮ್ಮನನ್ನು ಹಣಕ್ಕಾಗಿ ಕೇಳುವುದೂ ಅಶಕ್ಯವಿತ್ತು. ಒಂದೊಂ ದಾಗಿ ನನ್ನ ಒಡವೆಗಳನ್ನು ಮಾರಿ ದಿನ ನೂಕತೊಡಗಿದೆ. ಸ್ವಲ್ಪ ಹಣ ಆಗ ಕಳುವಾಗಿಯೂ ಬಿಟ್ಟಿತು. ಕಂಗಾಲಾದೆ, ನಿರಾಶೆಯ ಕಾರ್ಮೋಡಗಳು ನನ್ನನ್ನು ಮುಸುಕತೊಡಗಿದ್ದವು. ಏನಾದರೂ ಮಗುವಿನ ಜನನವಾಗಲೇ ಬೇಕಿತ್ತು, ಆಸ್ಪತ್ರೆ ಸೇರಿದೆ. ಅಂಥ ಪರಿಸ್ಥಿತಿಯಲ್ಲಿ ನನ್ನ—ನಿಮ್ಮ ಮಗು ಹುಟ್ಟಿತು. ಅಲ್ಲಿಯ ವಾತಾವರಣ ನೋಡಿ ಆಸ್ಪತ್ರೆಯೊಂದು ಡಾಕ್ಟರರ ಅಧ್ಯಯನ ಶಾಲೆ ಎಂದುಕೊಂಡೆ.

"ನನ್ನ ಈ ವ್ಯರ್ಥ ಮಾತುಗಳಿಗಾಗಿ ಕ್ಷಮಿಸಿರಿ. ನಾನು ಮುಂದೆಂದೂ ಇಂಥ ಮಾತನಾಡುವದಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ಕೊನೆಯ ವರೆಗೂ ನನ್ನ ಬಾಯಿ ಮುಚ್ಚುತ್ತದೆ. ಮಗು—ಮರದಂತೆ ಬಿದ್ದ ಈ ಸುಕುಮಾರ

ದೇಹಕ್ಕೆ ನಾನು ತೆತ್ತ ಬೆಲೆ ಎಷ್ಟು ಎಂಬುದು ನಿಮಗೆ ಕೇಳುವಂತೆ ಚೀರ ಬೇಕಾಗಿತ್ತು. ಅದರ ಮುದ್ದು ಮುಖ ನೋಡಿ—ಅದರ ತೊದಲು ಮಾತು ಕೇಳಿ ನನ್ನ ಕಷ್ಟವೆಲ್ಲವನ್ನೂ ಮರೆತಿದ್ದೆ. ಇೀಗ ಅದು ಕಣ್ಣು ಮುಚ್ಚಿದಾಗ ನನ್ನ ವೇದನೆಗಳೆಲ್ಲವೂ ಮರುಕಳಿಸಿದವು. ನನ್ನಿಂದ ಸುಮ್ಮನಿರುವು ದಾಗಲಿಲ್ಲ. ನಾನು ನಿಮ್ಮನ್ನು ದೂಷಿಸುವದಿಲ್ಲ. ನಾನು ದೂಷಿಸುವದು ಆ ದೇವನನ್ನು—; ಕರುಣಾಳು ಎಂದು ಕರೆಸಿಕೊಂಡು ಕರುಳು ಕೊರೆಯುವ ದೇವನನ್ನು. ಎಂಥ ಕಷ್ಟಗಳಲ್ಲಿಯೂ ಕೂಡ ನಿಮ್ಮ ಪ್ರೇಮ, ಗೌರವ ತತ್ತರಿ ಸುತ್ತಿರಲಿಲ್ಲ. ಆ ಮೂರು ದಿನಗಳ ರಸ ನಿಮಿಷಗಳಿಗಾಗಿ ಎಂಥ ನರಕಯಾ ತನೆಯಾದರೂ ಅನುಭವಿಸಲು ಸಿದ್ಧಳಿದ್ದೆ. ಒಮ್ಮೆಯಲ್ಲ ಸಾವಿರಸಲ!"

"ನಮ್ಮ ಮಗು ನಿನ್ನೆ ತೀರಿತು; ನೀವು ಅದನ್ನು ನೋಡಲಿಲ್ಲ. ಅದರ ಸುಂದರ ಕೋಮಲ ಶರೀರದ ಸಂಪರ್ಕ ಒಮ್ಮೆಯೂ ಆಗಲಿಲ್ಲ ನಿಮಗೆ. ಮಗು ಹುಟ್ಟಿದ ಕೂಡಲೇ ನಾನು ನಿಮ್ಮಿಂದ ದೂರವಾಗ ತೊಡಗಿದೆ. ಮೊದಲಿನ ಉನ್ಮಾದವಿರಲಿಲ್ಲ. ತಾಳದಪ್ಪಿ ಕುಣಿಯುವ ಆ ಲಾಲಸೆಗಳಿ ರಲಿಲ್ಲ. ಚಂಚಲತೆ ಕರಗಿತ್ತು. ನಿಮ್ಮ ಮತ್ತು ಈ ಮಗುವಿನ ನಡುವೆ ನನ್ನ ಪ್ರೇಮದ ಹಂಚಿಕೆಯಾಗುವುದು ನನಗೆ ಬೇಕಾಗಿರಲಿಲ್ಲ. ನನ್ನಿಂದ ದೂರ ವಿದ್ದು ನೀವು ಸಂತೋಷದಿಂದಿದ್ದಿರಿ. ಮಗುವಿಗೆ ತಾಯಿಯ ಅವಶ್ಯಕತೆ ಇದ್ದಿತು. ಅದರ ಲಾಲನೆ ಪಾಲನೆಯಲ್ಲಿ ಆಟ ನೋಟಗಳಲ್ಲಿ ನಿಮ್ಮ ನೆನಪು ಕಡಿಮೆಯಾಗುತ್ತ ಬಂದಿತ್ತು. ಆದರೆ ನಿಮ್ಮ ಹುಟ್ಟಿದ ದಿವಸ ಗುಲಾಬಿ ಹೂಗಳನ್ನು ಕಳಿಸುವುದನ್ನು ನಾನು ಮರೆಯುತ್ತಿರಲಿಲ್ಲ. ಈ ಹನ್ನೊಂದು ವರ್ಷಗಳಲ್ಲಿ ಒಮ್ಮೆಯಾದರೂ ಈ ಹೂಗಳು ಯಾರಿಂದ ಬರುವವೆಂಬುದನ್ನು ತಿಳಿಯಲು ಯತ್ನಿಸಿರುವಿರಾ? ಇಂಥವೇ ಹೂಗಳನ್ನು ಹನ್ನೊಂದು ವರ್ಷಗಳ ಹಿಂದಿನ ಒಂದು ರಾತ್ರಿ, ನಿಮ್ಮ ಪ್ರೇಮದ ಪ್ರತೀಕವಾಗಿ ಹುಡುಗಿ ಯೊಬ್ಬಳಿಗೆ ಕೊಟ್ಟ ನೆನಪಿದೆಯೇ? ನಿಮಗೆ ನೆನಪಿರಲಿ—ಇಲ್ಲದಿರಲಿ. ವರ್ಷದ ದೀರ್ಘ ಅವಧಿಯಲ್ಲಿ ನಿಮ್ಮ ಒಂದೊಂದು ಜನ್ಮದಿನವೂ ನನಗೆ ಶಾಂತಿದಾಯಕವಾಗಿತ್ತು. ಆ ದಿನ ಹೂಗಳನ್ನು ಕಳಿಸಿ 'ಅಂದಿನ ರಾತ್ರಿ'ಯ ಕ್ಷಣಗಳನ್ನು ಚಿರಸ್ಮರಣೀಯವಾಗಿ ಉಳಿಸಿಕೊಳ್ಳಲು ಯತ್ನಿಸುತ್ತಿದ್ದೆ."

"ನೀವು ಮಗುವನ್ನು ನೋಡಲಿಲ್ಲ; ನೋಡಿದ್ದರೆ ಅವಶ್ಯವಾಗಿ ಪ್ರೀತಿ ಸುತ್ತಿದ್ದಿರಿ. ಮಲಗಿ ಎದ್ದ ಕೂಡಲೇ ತೆಳು ತುಟಿಗಳ ಮೇಲೆ ಸುಳಿಯುವ

ತಿಳಿನಗು—ಸುಂದರವಾಗಿ, ಮುಗ್ಧವಾಗಿ ಹೊಳೆಯುವ ಕಣ್ಣುಗಳು—ಎಂಥ ವರನ್ನೂ ಆಕರ್ಷಿಸುತ್ತಿದ್ದವು. ಗುಣ—ರೂಪು ಎಲ್ಲವೂ ನಿಮ್ಮ ಹಾಗೆಯೇ. ಗಂಟೆಗಳವರೆಗೆ ಅವನು ಆಡುತ್ತಿದ್ದ—ನೀವು ಜೀವನದೊಡನೆ ಆಡುವಂತೆ. ಮತ್ತೆ ಒಮ್ಮೆ ಪುಸ್ತಕಗಳಲ್ಲಿ ಮುಗ್ನನಾಗುತ್ತಿದ್ದ. ನಿಮ್ಮ ವೈಶಿಷ್ಟ್ಯವಾದ ಚಂಚಲತೆ ಮತ್ತು ಗಂಭೀರತೆಯ ಸಮನ್ವಯ ಅವನಲ್ಲಿಯೂ ಇಳಿದು ಬಂದಿತ್ತು. ಅವನ ಬುದ್ಧಿಯೂ ಅಷ್ಟೇ ತೀಕ್ಷ್ಣ. ಸ್ಕೂಲಿನಲ್ಲಿ ಅವನದು ಯಾವಾಗಲೂ ಮೊದಲನೆಯ ನಂಬರು! ದೃಷ್ಟಿಯಾಗುವ ರೂಪು—ತೀಕ್ಷ್ಣ ಬುದ್ಧಿ—ಇದರಿಂದ ಅವನನ್ನು ಕಂಡರೆ ಎಲ್ಲರಿಗೂ ಪ್ರೀತಿ. ಸಾವು ಕೂಡ ಅವನನ್ನು ಪ್ರೀತಿಸಿ ತನ್ನ ಉಡಿಯಲ್ಲಿ ಮಲಗಿಸಿಕೊಂಡಿತು. ಹೊಳೆಯುವ ಕಣ್ಣುಗಳು ಮುಚ್ಚಿಕೊಂಡಿವೆ. ಚಿಗುರಿನಂತಿದ್ದ ತುಟಿ ರಕ್ತವಿಹೀನವಾಗಿ ಬಿಳುಪೇರಿವೆ.

"ಇಂಥ ಕಷ್ಟ ಸಮಯದಲ್ಲಿ ಮಗುವಿನ ಪಾಲನೆ ಪೋಷಣೆಯ ಗುರುತರವಾದ ಕೆಲಸವನ್ನು ಹೇಗೆ ನೀಗಿಸಿಕೊಂಡು ಹೋದೆನೆಂದು ನೀವು ಯೋಚಿಸುತ್ತಿರಬಹುದು. ನಾನು ನಿರ್ಲಜ್ಜಳಾಗಿ ಹೇಳುತ್ತೇನೆ;—ಅದಕ್ಕಾಗಿ ನನ್ನನ್ನು ಮಾರಿಕೊಂಡೆ. ನಾನೊಬ್ಬ ಬೀದಿಯ ವೇಶ್ಯೆಯಾಗದಿದ್ದರೂ ಕೂಡ ಗರತಿಯ ಪಾವಿತ್ರ್ಯ ನನ್ನಲ್ಲುಳಿಯಲಿಲ್ಲ. ಒಬ್ಬ ಶ್ರೀಮಂತ ತರುಣ ನನ್ನ ಮೇಲೆ ಬಹಳ ದಿನಗಳಿಂದಲೂ ಕಣ್ಣಿಟ್ಟಿದ್ದ. ನನ್ನ ಕೈಯಲ್ಲಿ ಹಣವಿರುವವರೆಗೆ ನಾನವನಕಡೆ ಕಣ್ಣೆತ್ತಿ ಕೂಡ ನೋಡಲಿಲ್ಲ. ಆದರೆ ಮಗುವಿನ ಪಾಲನೆಗಾಗಿ ಅವನನ್ನು ಹುಡುಕಿಕೊಂಡು-ಹೊರಟೆ. ಬರ ಬರುತ್ತ ಅವನೇ ನನ್ನನ್ನು ಹುಡುಕಿಕೊಂಡು ಬರತೊಡಗಿದ. ನನ್ನಲ್ಲಿ ಸೌಂದರ್ಯವಿತ್ತು. ನನ್ನ ಸಂಪರ್ಗದಲ್ಲಿ ಬಂದವರೆಲ್ಲರೂ ನನ್ನ ಭಕ್ತರಾಗುತ್ತಿದ್ದರು. ನನ್ನ ಚಿರ ಅನುರಾಗಿಗಳಾಗುತ್ತಿದ್ದರು. ನೀವು—ನೀವೊಬ್ಬರೆ ಇವರಿಂದ ಭಿನ್ನರಾದಿರಿ. ನೀವೊಬ್ಬರೆ ನನ್ನನ್ನು ಲಕ್ಷಿಸಲಿಲ್ಲ ಆದರೂ ನಿಮ್ಮನ್ನೇ ನಾನು ಪ್ರೀತಿಸಿದೆ. ನನ್ನ ಅವಸ್ಥೆ ಏನೇ ಆದರೂ ನೀವೇ ನನ್ನ ಪ್ರೇಮದ ಅಧಿದೇವತೆಗಳಾಗಿ ಬಿಟ್ಟಿರಿ ಕೊನೆಗೂ.

"ನನ್ನ ಈ ವರ್ತನೆ ಜನಕ್ಕೆ ಕೀಳೆನಿಸಿದರೂ ನಿಮಗೆ ಹಾಗೆನಿಸಲಿಕ್ಕಿಲ್ಲವೆನಿಸುತ್ತದೆ. ನಾನು ನಿಮ್ಮನ್ನು ಎಷ್ಟು ಪ್ರೀತಿಸಿದ್ದೇನೆಂದರಿತ ಮೇಲೆ

ನೀವು ನನ್ನ ಅಸಹಾಯತೆಯನ್ನು ಅಳೆಯ ಬಲ್ಲಿರಿ; ನನ್ನ ಕಷ್ಟ ನಷ್ಟಗಳನ್ನು ಕಾಣಬಲ್ಲಿರಿ, ಎಂದು ನಂಬುತ್ತೇನೆ. ನಾನು ಮಾಡಿದ್ದೆಲ್ಲವೂ ಕೇವಲ ನಿಮಗಾಗಿ—ನಿಮ್ಮ ಪ್ರತಿರೂಪಕ್ಕಾಗಿ; ನಮ್ಮಿಬ್ಬರ ಏಕ ಮಾತ್ರ ಸಂತಾನಕ್ಕಾಗಿ. ಆಸ್ಪತ್ರೆಯಲ್ಲಿದ್ದಾಗ ಬಡತನದ ಕಟು ಅನುಭವವೊದಗಿತ್ತು. ದೀನರನ್ನು, ದಲಿತರನ್ನು ಎಷ್ಟು ನಿರ್ದಯೆಯಿಂದ ತುಳಿಯುತ್ತಾರೆಂಬುದನ್ನು ಕಂಡುಕೊಂಡಿದ್ದೆ. ಅಂತೇ ನಮ್ಮ ಮಗುವನ್ನು ಆ ಬಡತನದ ಕರಾಳ ಛಾಯೆಯಿಂದ ಆದಷ್ಟೂ ದೂರವಿಡಬೇಕಾಗಿತ್ತು. ಅಸಂಸ್ಕೃತ ವಾತಾವರಣದಲ್ಲಿ—ಹೊಲಸು ಓಣಿಗಳಲ್ಲಿ ಅಶಿಕ್ಷಿತ ಜನರೊಡನೆ 'ನಿಮ್ಮ' ಮಗು ಬೆಳೆಯುವುದು, ನನಗೆ ಅಸಹನೀಯವಾಗಿತ್ತು. ಜಗತ್ತಿನ ಸುಂದರ ವಸ್ತುಗಳೆಲ್ಲವೂ ನಿಮ್ಮ ಮಗುವಿಗೆ ದೊರೆಯಬೇಕೆಂದು ಬಯಸಿದೆ. ಅವನೂ ನಿಮ್ಮಂತೆಯೇ ಬೆಳೆದು ಬರಬೇಕೆಂದು ಬಲವಾದ ಆಶೆಯಿತ್ತು.

" ಇದೆಲ್ಲವನ್ನೂ ಯೋಚಿಸಿಯೇ ನನ್ನನ್ನು ನಾನು ನಿರುಪಾಯಳಾಗಿ ಮಾರಿಕೊಂಡೆ. ಇದು ನಾನು ಮಾಡಿದ ತ್ಯಾಗವೆಂದು ನಾನು ಹೇಳಿಕೊಳ್ಳಲಾರೆ. ಮಾನಾಪಮಾನಗಳಿಗೆ ನನ್ನ ದೃಷ್ಟಿಯಲ್ಲಿ ಯಾವ ಬೆಲೆಯೂ ಇರಲಿಲ್ಲ. ನನ್ನ ದೇಹ ನಿಮ್ಮದಿತ್ತು. ನೀವು ಅದನ್ನು ಪ್ರೀತಿಸುತ್ತಿರಲಿಲ್ಲ. ಅಂದ ಮೇಲೆ ಆ ಶರೀರಕ್ಕೆ ಏನಾದರೇನು ? ಅದರ ಚಿಂತೆ ನನಗೇಕೆ ? ನನ್ನ ದೇಹದ ಜೊತೆ ಸಂಬಂಧ ಬೆಳೆಸಿದವರಲ್ಲಿ ಯಾರೊಬ್ಬರಿಗೂ ನನ್ನ ಪ್ರೀತಿಯ ಅಂತರಾಳದಲ್ಲಿಳಿಯುವುದು ಅಸಂಭವವಿತ್ತು. ಅದರಲ್ಲಿ ಎಷ್ಟೋ ಜನರು ಸಜ್ಜನರಿದ್ದರು. ಅಂತಃಕರಣಿಗಳೂ ಇದ್ದರು. ನನ್ನ ಹಟಮಾರಿತನಕ್ಕೆ ಅವರು ಮುಖ ಮುದುಡಿಕೊಳ್ಳುತ್ತಿರಲಿಲ್ಲ. ವಯಸ್ಸಾದವರೊಬ್ಬರ ಸಹಾಯದಿಂದ ನಿಮ್ಮ ಮಗು ಶಾಲೆ ಸೇರಿತು. ನನ್ನ ಮೇಲೆ ಅವರದು ಅತಿಶಯ ಪ್ರೀತಿಯಿತ್ತು. ಮೂರು ನಾಲ್ಕು ಸಲ ಲಗ್ನದ ಇಚ್ಛೆಯನ್ನು ತೋರ್ಪಡಿಸಿದ್ದರು. ಅವರ ಇಚ್ಛೆಗೆ ಒಪ್ಪಿದ್ದರೆ ಇಂದು ನಾನು ದೊಡ್ಡ ಇಸ್ಟೇಟಿನ ಒಡೆಯಾಳಾಗುತ್ತಿದ್ದೆ. ಆದರೂ ನಾನು ನಿರಾಕರಿಸಿದ್ದೆ. ಇದರಿಂದ ಅವರಿಗೆ ಕ್ಲೇಶವಾಗುವುದೆಂದು ತಿಳಿದರೂ ನಾನು ಒಪ್ಪಲಿಲ್ಲ. ನನಗೆ ಬಂಧನ ಬೇಕಾಗಿರಲಿಲ್ಲ. ಸ್ವತಂತ್ರಳಾಗಿರಬಯಸಿದೆ—ಕೇವಲ ನಿಮಗಾಗಿ. ಎದೆಯ ಅಂತರಾಳದಲ್ಲಿ ಬಾಲ್ಯದಲ್ಲಿ ಬೆಳೆದ ಆ ಮಲ್ಲಿಗೆ ಬಳ್ಳಿಗೆ ನೀರೆರೆಯುತ್ತಿದ್ದೆ.

ಎಂದಾದರೊಂದು ದಿನ ನನ್ನ ನೆನವು ನಿಮಗಾಗಬಹುದು—ಆಗ ನೀವು ನನ್ನನ್ನು ಕರೆಯಬಹುದು ಎಂದು ನಂಬಿದ್ದೆ. ನನ್ನ ದೇವನ ಕರೆಬಂದಾಗ ಆ ಕರೆಗೆ ಓ ಕೊಡಬೇಕೆಂತಲೇ ನಾನು ಯಾರ ಹಂಗಿನಲ್ಲಿಯೂ ಇರಬಾರ ದೆಂದು ನಿಶ್ಚಯಿಸಿದ್ದೆ. ನನ್ನ ಬಾಳೆಲ್ಲ ನಿರೀಕ್ಷಣೆಯಲ್ಲಿಯೇ ಕಳೆಯಿತು—ನಿರೀಕ್ಷಣೆ—ಬರೀ ನಿರೀಕ್ಷಣೆ!"

"ನನ್ನ ಪ್ರತೀಕ್ಷೆ ಫಲಿಸುವ ಹೊತ್ತು ಬಂದಿತ್ತು ಆದರೂ ನೀವು ಅದರಿಂದ ಪೂರ್ಣ ಅಪರಿಚಿತರಿದ್ದಿರಿ. ಆ ಕ್ಷಣ ಒದಗಿ ಬಂದಾಗಲೂ ನೀವು ನನ್ನನ್ನು ಗುರುತಿಸಲಿಲ್ಲ. ನೀವು ನನ್ನನ್ನು ಗುರುತಿಸಲೇ ಇಲ್ಲ.—ಕೊನೆಯ ವರೆಗೂ—ಕೊನೆಯವರೆಗೂ! ಸಿನೆಮಾ ಮಂದಿರಗಳಲ್ಲಿ—ಹೋಟೆಲುಗಳಲ್ಲಿ ತಿರುಗಾಡಲು ಹೋದಾಗ ನಿಮ್ಮನ್ನು ಕಾಣುತ್ತಿದ್ದೆ. ನಿಮ್ಮ ದರ್ಶನವಾದಾಗ ಹೃದಯ ಕುಣಿಯುತ್ತಿತ್ತು. ಆದರೆ ನೀವು ನನ್ನ ಕಡೆ ನೋಡದೆ ಮುಂದೆ ಹೋಗಿ ಬಿಡುತ್ತಿದ್ದಿರಿ. ಬಾಹ್ಯ ದೃಷ್ಟಿಯಿಂದ ನನ್ನಲ್ಲಿ ಸಂಪೂರ್ಣ ಪರಿ ವರ್ತನೆಯಾಗಿತ್ತು. ನಾನೀಗ ಆ ಮುಗ್ಧ—ಭೀರು ಬಾಲಿಕೆಯಾಗಿರಲಿಲ್ಲ. ಸುಂದರ ಯುವತಿಯಾಗಿದ್ದೆ. ಬೆಲೆ ಬಾಳುವ ಬಟ್ಟೆಗಳು ನನ್ನ ಮೈ ಮೇಲಿ ರುತ್ತಿದ್ದುವು—ಸುತ್ತಲೂ—ಪ್ರಶಂಸಕರು. ಇಂಥದರಲ್ಲಿ ನಾಚಿಕೆಯಿಂದ ಅರೆ ಜೀವವಾಗುತ್ತಿದ್ದ ಆ ಹಿಂದಿನ ಹುಡುಗಿಯ ಪರಿಚಯವನ್ನು ನೀವು ಅರಿಯ ಬಹುದಾದರೂ ಹೇಗೆ? ಒಮ್ಮೊಮ್ಮೆ ನನ್ನ ಜೊತೆಗಿದ್ದವರು ನಿಮ್ಮನ್ನು ಮಾತ ನಾಡಿಸುತ್ತಿದ್ದರು. ನೀವು ನನ್ನ ಕಡೆ ನೋಡುತ್ತ ಉತ್ತರಿಸುತ್ತಿದ್ದಿರಿ. ನಿಮ್ಮ ನೋಟದಲ್ಲಿ ಪರಿಚಯದ ಸುಳುಹು ಕೂಡ ಹೊಳೆಯುತ್ತಿರಲಿಲ್ಲ. ಇದರಿಂದ ಅತಿಶಯ ವೇದನೆಯಾಗುತ್ತಿತ್ತು. ಒಂದು ಸಲ ನಾನು 'ಅಪೇರಾ'ದಲ್ಲಿ ನನ್ನ ಗೆಳೆಯನೊಬ್ಬನೊಡನೆ 'ಬಾಕ್ಸಿ'ನಲ್ಲಿ ಕುಳಿತಿದ್ದೆ. ನೀವು ಎರಡನೆಯ ದರಲ್ಲಿದ್ದಿರಿ. ನಿಮ್ಮನ್ನು ಅಲ್ಲಿ ಕಂಡ ಕೂಡಲೇ ಹುದುಗಿದ ಆಶೆ ತಲೆ ಎತ್ತಿ ದವು. ಚಿತ್ರದ ಸಂಗೀತ ಮತ್ತಿಷ್ಟು ಉನ್ಮತ್ತಳನ್ನಾಗಿ ಮಾಡಿತು. ನಿಮ್ಮೆ ಡೆಗೆ ಬರಲು ಜೀವ ಹಾತೊರೆಯತೊಡಗಿತ್ತು. ಕೂಡುವದಾಗಲಿಲ್ಲ. ಎದ್ದು ಮನೆಗೆ ಹೊರಟೇ ಬಿಟ್ಟೆ. ನಿಮ್ಮ ಸಮೀಪದಲ್ಲಿದ್ದೂ ದೂರವಾಗಿರುವುದು ನನಗೆ ನರಕಯಾತನೆಯಾಗಿತ್ತು.

"ಇಂತಹದೇ ಸಮಯ ಇನ್ನೊಮ್ಮೆ ಒದಗಿ ಬಂದಿತು. ಒಂದು

ವರ್ಷದ ಹಿಂದಿನ ಮಾತು. ಅಂದು ನಿಮ್ಮ ಹುಟ್ಟಿದ ದಿನ. ಅಂದು ನನಗೆ ಹಬ್ಬ. ನಸುಕಿನಲ್ಲಿಯೇ ಹೂ ಕೊಳ್ಳಲು ಹೋದೆ." ಮಗುವಿಗೆ ನನ್ನ ಜೀವನದ ಮಹತ್ವದ ದಿನವೆಂದು ತಿಳಿಸುವದರಲ್ಲಿಯೇ ಹಗಲು ಕಳೆಯಿತು. ಸಾಯಂಕಾಲ ನಾನು ನನ್ನ ಜೊತೆಗಾರನೊಡನೆ ತಿರುಗಾಡಲು ಹೊರಟೆ. ಅವನೊಡನೆ ಇರತೊಡಗಿ ಎರಡು ವರ್ಷಗಳಾಗಿದ್ದುವು ಎಲ್ಲಿಲ್ಲದ ಉತ್ಸಾಹ ಮೂಡಿತ್ತು ಅಂದು. ನೃತ್ಯ ಸಂಗೀತದಿಂದ ದೂರ ಓಡುತ್ತಿದ್ದ ನಾನು ಅಂದು ಅವರನ್ನು ನೃತ್ಯಕ್ಕೆ ಬರಲು ಒತ್ತಾಯಪಡಿಸಿದೆ. ಇಬ್ಬರೂ ಒಂದು ಕನ್ಸರ್ಟ್ (Concert) ಸೇರಿದೆವು. ಜನ ತುಂಬಿದ್ದರು. ಸಂಗೀತದ ಮಧುರ ನಿನಾದ ಹಬ್ಬಿತ್ತು. ನಾವಿಬ್ಬರೂ ಒಂದು ಕಡೆ ಕುಳಿತೆವು. ನಾನೆಂದೂ ಕುಡಿಯುವ ಹವ್ಯಾಸಕ್ಕೆ ಹೋಗಿರಲಿಲ್ಲ. ಅಂದು ಮೇರೆದಪ್ಪಿ ಕುಡಿದೆ. ಎದೆಯು ಉನ್ಮಾದ ನೃತ್ಯಕ್ಕಾಗಿ ಹಾತೊರೆಯುತ್ತಿತ್ತು. ಏಳುವವಳೇ ಇದ್ದೆ. ಆದರೆ ಒಮ್ಮೆಲೇ ಬರೀ ಮೈಯಿಂದ ಮಂಜಿನಲ್ಲಿ ಮಲಗಿಸಿ ಚಾಬಕದಿಂದ ಹೊಡೆದಂತಾಯಿತು. ಸಮೀಪದಲ್ಲಿಯೇ ಕುಳಿತು ನೀವು ನನ್ನನ್ನೇ ನೋಡುತ್ತಿದ್ದಿರಿ. ನಿಮ್ಮ ದೃಷ್ಟಿಯಲ್ಲಿ ಆಶೆಯಿತ್ತು—ಪ್ರತಿಭಟನೆಯ ಸೆಳತವಿತ್ತು. ನಾನು ಹುಚ್ಚಳಾದೆ—ಹತ್ತು ವರ್ಷಗಳ ನಂತರ ಮತ್ತೆ ಆ ಅನುಭವವಾಯಿತು. ಮೈಯಲ್ಲಿ ನಡುಕ ಹುಟ್ಟಿತು ಕೈಯಲ್ಲಿದ್ದ ಗ್ಲಾಸು ಬೀಳುವದೇನೋ ಎನ್ನಿಸಿತು. ನನ್ನ ಸುದೈವ—ಯಾರೂ ಆ ನನ್ನ ಸ್ಥಿತಿಯನ್ನು ಗಮನಿಸಲಿಲ್ಲ.

"ನಿಮ್ಮ ನೋಟದಲ್ಲಿ ಹಸಿವು ಕಾಣತೊಡಗಿದಂತೆ ಮತ್ತೊಮ್ಮೆ ನನ್ನ ಹೃದಯದಲ್ಲಿ ಜ್ವಾಲೆ ಹಬ್ಬ ತೊಡಗಿದವು. ನೀವು ನನ್ನನ್ನು ಗುರುತಿಸಲಿಲ್ಲ. ಒಬ್ಬ ಹೊಸ ಅಪರಿಚಿತಳೆಂದೇ ತಿಳಿದು ನಿಮ್ಮ ಲಾಲಸೆಗಳು ಎದ್ದಿರಬೇಕು. ಆದರೂ ನನ್ನ ಕೆನ್ನೆ ಕೆಂಪೊಡೆದುವು. ಹುಚ್ಚು ಹುಚ್ಚಾಗಿ ಮಾಡತೊಡಗಿದೆ ನನ್ನ ಅವಸ್ಥೆ ನಿಮ್ಮ ಗಮನಕ್ಕೆ ಬಂದಿತು. ಅಲ್ಲಿಯೇ ಇದ್ದ ಕೋಣೆಯಲ್ಲಿ ಕ್ಷಣ ಮಾತ್ರ ಬರಲು ಕಣ್ಸನ್ನೆ ಮಾಡಿದಿರಿ. ಬಿಲ್ ಕೊಟ್ಟು ನೀವು ಎದ್ದು ನಿಂತಿರಿ. ಗೆಳೆಯರೆಲ್ಲರೂ ಹೊರಟು ಹೋದರು. ಹೊರಗೆ ನಿಲ್ಲುವದಾಗಿ ಹೇಳಿದಿರಿ. ನಾನು ಕಂಪಿಸಿದೆ. ಶ್ವಾಸ ತೀವ್ರವಾಯಿತು. ಮೈಯಲ್ಲಿ ರಕ್ತ ಜೋರಾಗಿ ಹರಿಯತೊಡಗಿತು. ಅದನ್ನು ಅಳವಿನಲ್ಲಿ ತರಲು ನಿರರ್ಥಕ

ಯತ್ನ ಮಾಡಿದೆ. ಅದೇ ಕಾಲಕ್ಕೆ ನೃತ್ಯ—ಸಂಗೀತ ಜೋರಾಗಿ ನಡೆದಿತ್ತು. ಜನರೆಲ್ಲರೂ ಅದರಲ್ಲಿಯೇ ಮಗ್ನರಾಗಿದ್ದರು. ನಾನು ತೀವ್ರವೇ ಬರುವು ದಾಗಿ ಹೇಳಿ ನಿಮ್ಮ ಹಿಂದೆಯೇ ಹೊರಟೆ.

"ಹೊರಗೆ ನೀವು ನನಗಾಗಿ ಕಾಯುತ್ತಿದ್ದಿರಿ. ನಾನು ಬರುತ್ತಿರುವು ದನ್ನು ಕಂಡು ಮುಖ ಹಿಗ್ಗಿತು. ಉಕ್ಕಿ ಬಂದ ಉತ್ಸುಕತೆಯಿಂದ ನೀವು ಮುಂದೆ ಬಂದಿರಿ. ಆದರೂ ನೀವು ನನ್ನನ್ನು ನಾನೇ ಎಂದು ಗುರುತಿಸಲಿಲ್ಲ. ನಿಮ್ಮ ಜೀವನದಲ್ಲಿ ಹಿಂದೆ ಒಮ್ಮೆ ಬಂದವಳೆಂದು ನೀವು ನನ್ನನ್ನು ಕಾಣ ಲಿಲ್ಲ. ನಿಮಗಾಗ ನಾನು ಹೊಸಬಳಾದೆ.

''ನನಗಾಗಿ ಒಂದು ಗಂಟೆಯನ್ನು ವಿನಿಯೋಗಿಸ ಬಲ್ಲಿರಾ ?" ಎಂದು ನಿಶ್ಚಯದ ಸ್ವರದಲ್ಲಿ ಆದರೂ ಹೊಸಬರನ್ನು ಕೇಳುವಂತೇ ನೀವು ಕೇಳಿದಿರಿ. ಒಂದು ರಾತ್ರಿಯ ಸಲುವಾಗಿ ಕೊಂಡುಕೊಳ್ಳಬಹುದಾದ ಒಬ್ಬ ಹೆಂಗಸು ಎನ್ನುವ ಧ್ವನಿ ಇತ್ತು ನಿಮ್ಮ ಮಾತಿನಲ್ಲಿ; ನಿಮ್ಮನ್ನೇ ಆ ಜನ್ಮ ಪ್ರೀತಿಸಿದ ಹೆಣ್ಣು ನಾನೆಂಬ ಅರಿವಾಗಲೀ ಗುರುತಾಗಲೀ ಅದರಲ್ಲಿರಲಿಲ್ಲ.

'ಅವಶ್ಯವಾಗಿ' ಎಂದು ಅಂದಿನಂತೆ ಇಂದೂ ಉತ್ತರಿಸಿದೆ.

'ಹಾಗಾದರೆ ಯಾವಾಗ ಭೆಟ್ಟಿಯಾಗೋಣ'

'ನಿಮ್ಮ ಇಚ್ಛೆ ಬಂದಾಗ' ಎಂದು ನಿರಾತಂಕವಾಗಿ ಹೇಳಿದೆ. ನಿಮ್ಮ ಸಂಬಂಧ ಒದಗಿದಾಗ ನನಗಾವ ನಾಚಿಕೆಯೂ ಇರುತ್ತಿರಲಿಲ್ಲ. ಆಶ್ಚರ್ಯ ದಿಂದ ನೀವು ನನ್ನ ಕಡೆ ನೋಡಿದಿರಿ—ಅದೇ ರೀತಿಯಾಗಿ ಆಗ ಮೂಡಿ ದಂತೆ ಇೀಗಲೂ ಶಂಕೆ ಮೂಡಿತ್ತು ನಿಮ್ಮಲ್ಲಿ.

' ಈಗಲೇ ? '

ಒಂದು ಕ್ಷಣ ಯೋಚಿಸಿ 'ಹೂಂ' ಅಂದೆ.

"ನನ್ನ ಮೇಲು ಹೊದಿಕೆ ಕುರ್ಚಿಯ ಮೇಲೆಯೇ ಉಳಿದಿತ್ತು. ಅದನ್ನು ತರಲು ಹೋದರೆ ಹಿಂದಿರುಗುವುದೇ ಅಸಂಭವವಿತ್ತು. ವರುಷಗಳ ವರೆಗೆ ನಿರುಕಿಸಿದ ಕ್ಷಣ ಅಂದು ಒದಗಿ ಬಂದಾಗ ಆ ಬಂಗಾರದಂತಹ ಹೊತ್ತನ್ನು ಹೋಗಗೊಡಲು ಮನಸ್ಸು ಒಪ್ಪಲಿಲ್ಲ. ನಿಮ್ಮೊಡನೆ ಹೊರಟುಬಿಟ್ಟೆ. ಎರಡು ವರ್ಷಗಳವರೆಗೂ ಆ, 'ಅವನು' ತೋರಿದ ಕನಿಕರ ಗೌರವ ಎಲ್ಲವೂ ಮರೆತು ಹೋಯಿತು. ನನಗೆ ಗೊತ್ತಿತ್ತು—ನಾನು ಅವನ ಬಗೆಗೆ ಕೃತಘ್ನಳಾಗ

ತೊಡಗಿದ್ದೇನೆಂದು. ನನ್ನ ವರ್ತನೆಯಿಂದ ಅವನು ನೊಂದುಕೊಂಡರೆ ನನ್ನ, ನನ್ನ ಮಗುವಿನ ಜೀವನಕ್ಕೆ ಭಯಂಕರ ಹಾನಿಯಾಗುವುದೆಂಬ ಅರಿವೂ ನನಗಿತ್ತು. ಆದರೆ ನಿಮ್ಮ ಜೊತೆ, ಪ್ರಾಣಕ್ಕಿಂತಲೂ ಪ್ರಿಯವಾದ ನಿಮ್ಮ ಜೊತೆ ಬಿಡುವದು ನನ್ನಿಂದಾಗಲಿಲ್ಲ. ನನ್ನ ಜೀವನವೇ ನಿಮ್ಮ ಒಂದು ಮಾತಿಗಾಗಿ ನಿವಾಳಿಸಿ ಚೆಲ್ಲಬಹುದಾದಾಗ ಅವನ ಪಾಡೇನು? ಇೀಗ ನೋಡಿ; ಸಾವಿನ ಹಾಸಿಗೆಯಲ್ಲಿ ಮಲಗಿದಾಗಲೂ ನೀವು ಕರೆದರೆ ಕೂಡಲೇ ಎದ್ದು ಬರಬಲ್ಲೆ!

"ನಿಮ್ಮ ಮನೆಗೆ ಬಂದೆವು. ನಿಮ್ಮ ಸಾಮೀಪ್ಯದಿಂದ ಅನಿರ್ವಚನೀಯ ಆನಂದವನ್ನನುಭವಿಸತೊಡಗಿದ್ದೆ—ಹತ್ತು ವರ್ಷಗಳ ಹಿಂದೆ ಅನುಭವಿಸಿದಂತೆ. ಭೂತವರ್ತಮಾನಗಳೆರಡೂ ನನ್ನ ವಿಚಾರದಲ್ಲಿ ಸುಳಿಯತೊಡಗಿದುವು. ನಿಮ್ಮ ಕೋಣೆಯಲ್ಲಿ ಯಾವ ವಿಶೇಷ ಬದಲಾವಣೆಯಾಗಿರಲಿಲ್ಲ. ಕೆಲ ಚಿತ್ರಗಳು ಹೆಚ್ಚಿದ್ದುವು. ಪುಸ್ತಕಗಳ ಸಂಖ್ಯೆಯೂ ಹೆಚ್ಚಿತ್ತು. ಆಯಿತು; ಉಳಿದದ್ದೆಲ್ಲ ಮೊದಲಿನಂತೆಯೆ! ಕೋಣೆಯ ಪದಾರ್ಥಗಳೆಲ್ಲವೂ ನನ್ನನ್ನು ಗೆಳೆತನದ ಪ್ರೇಮದಿಂದ ಸ್ವಾಗತವನ್ನೀಯುವಂತೆ ಭಾಸವಾಯಿತು. ಮೇಜಿನ ಮೇಲಿದ್ದ ಹೂಜಿಯಲ್ಲಿ ನಾನು ಆ ದಿನವೇ ಮಧ್ಯಾಹ್ನ ಕಳುಹಿದ ಹೂಗಳಿದ್ದವು. ಯಾರ ನೆನಪಿಗಾಗಿ ಆ ಹೂಗಳನ್ನು ಕಳಿಸಿದ್ದೆನೋ ಅವಳನ್ನೇ ನೀವು ಮರೆತಿದ್ದಿರಿ. ಆಗಲೂ ನೀವು ಗುರುತಿಸಲಿಲ್ಲ ನಿಮಗೆ ನನ್ನ ಪರಿಚಯ ಬೇಕಾಗಿರಲಿಲ್ಲ. ನಿಮೀಲಿತ ನಯನದಿಂದ ತುಟಿಗೆ ತುಟಿ ಒತ್ತುವದು ಬೇಕಾಗಿತ್ತು. ಅಂಥದರಲ್ಲಿಯೂ ನನ್ನ ಹೂಗಳನ್ನು ಕಂಡು ಮನಸ್ಸಿಗೆ ಶಾಂತಿ ದೊರೆಯಿತು—ನನ್ನ ಹೂಗಳಾದರೂ ನಿಮ್ಮಲ್ಲಿರುವವಲ್ಲ ಎಂದು.

"ರಾತ್ರಿಯನ್ನೆಲ್ಲ ನಿಮ್ಮ ತೋಳ ಸೆರೆಯಲ್ಲಿಯೇ ಕಳೆದೆ. ಆದರೂ ನೀವು ನನ್ನನ್ನು ಗುರುತಿಸಲಿಲ್ಲ. ನಿಮ್ಮ ಪ್ರೇಮಾಲಿಂಗನದಲ್ಲಿ ನಾನು ಮೈ ಮರೆತಾಗ ಕೂಡ ನಾನೊಬ್ಬ ವೇಶ್ಯೆ, ಹೊರತಾಗಿ 'ಪ್ರೇಯಸಿ' ಎನ್ನುವ ಭಾವವನ್ನು ನೀವು ತೋರ್ಪಡಿಸಲಿಲ್ಲ. ಆದರೂ ನೀವು ನನ್ನೊಡನೆ ಪ್ರೇಮ ಗೌರವಗಳಿಂದ ವರ್ತಿಸಿದಿರಿ. ನಿಮ್ಮ ವರ್ತನೆಯಲ್ಲಿ ಶಿಥಿಲತೆಯಿರಲಿಲ್ಲ—ಕೀಳ್ತನವಿರಲಿಲ್ಲ. ಸಮ್ಮೋಹಕ ವ್ಯಗ್ರತೆಯಿತ್ತು. ನಿಮ್ಮ ಜೊತೆ ಮೈ ಮರೆತಾಗ ಕೂಡ ನಿಮ್ಮ ದ್ವಿಮುಖಭಾವದ ಸ್ಪಷ್ಟ ಸ್ವರೂಪ ಕಾಣುತ್ತಿತ್ತು.

ಮತ್ತಾವ ವ್ಯಕ್ತಿಯಲ್ಲೂ ಕ್ಷಣಿಕ ಸುಖದ ಹೊರತಾಗಿ ಇರೀತಿಯ ಸಂಪೂರ್ಣ ಸಮರ್ಪಣೆಯ ಆನಂದವನ್ನು ನಾನನುಭವಿಸಿರಲಿಲ್ಲ. ಕ್ಷಣ ಮಾತ್ರವೇ ಆಗಲಿ ಸ್ತ್ರೀಯೊಡನೆ ಪೂರ್ಣ ಪರವಶತೆಯಲ್ಲಿದ್ದು ಆ ಕ್ಷಣ ಕಳೆದ ಕೂಡಲೇ ಅವಳನ್ನು ನೆನಪಿನಿಂದ ತೆಗೆದು ಹಾಕುವದು ನಿಮ್ಮೊಬ್ಬರಿಂದಲೇ ಶಕ್ಯವಿರ ಬಹುದು. ನಿಮ್ಮ ಪರವಶತೆಯಲ್ಲಿ ನಾನು ನನ್ನನ್ನೇ ಮರೆಯುತ್ತಿದ್ದೆ. ನನ್ನ ವ್ಯಕ್ತಿತ್ವವೇ ತಿಳಿಯುತ್ತಿರಲಿಲ್ಲ........ಆ ವಿಲಕ್ಷಣ ರಾತ್ರಿಯಲ್ಲಿ ಎಲ್ಲದರ ಲ್ಲಿಯೂ ಉನ್ಮಾದ ತುಂಬಿದಂತಿತ್ತು. ಎಲ್ಲವೂ ನೂತನವೆನಿಸುತ್ತಿತ್ತು. ಆ ರಸ ನಿಮಿಷಗಳು ಅನಂತದವರೆಗೂ ಹಾಗೆಯೇ ಇರಲೆಂದು ಪ್ರಾರ್ಥಿ ಸುತ್ತಿದ್ದೆ. "

" ಆದರೆ ಬೆಳಕು ಹರಿಯುವುದೇನೂ ನಿಲ್ಲಲಿಲ್ಲ. ನಾವಿಬ್ಬರೂ ಆಗ ಕಣ್ಣಿಗೆ ಕಣ್ಣು ಹಚ್ಚಿದ್ದೆವು. ನೀವು ಊಟಕ್ಕಾಗಿ ನನ್ನನ್ನು ನಿಲ್ಲಿಸಿಕೊಂಡಿರಿ. ಚಹ ಕುಡಿಯುತ್ತ ಇಬ್ಬರೂ ಹಾಳು ಹರಟೆ ಕೊಚ್ಚಿದೆವು. ಎಂದಿನಂತೆ ನೀವು ನಿಮ್ಮ ಸೌಹಾರ್ದತೆ, ಔದಾರ್ಯ ತೋರಿಸಿಕೊಟ್ಟಿರಿ. ಯಾವ ನಿರರ್ಥಕ ಪ್ರಶ್ನೆಯನ್ನೂ ಕೇಳಲಿಲ್ಲ. ನನ್ನ ಸಂಬಂಧವನ್ನು, ಸ್ಥಿತಿಗತಿಗಳನ್ನು ತಿಳಿಯಲು ಯಾವ ಉತ್ಸುಕತೆಯನ್ನೂ ತೋರಲಿಲ್ಲ. ನನ್ನ ಹೆಸರು ದೆಸೆಯ ಬಗೆಗೆ ಒಂದಾದರೂ ಮಾತೆತ್ತಲಿಲ್ಲ. ಮೊದಲಿನಂತೆ ಅಂದೂಕೂಡ ಹೆಸರಿಲ್ಲದ ಹೆಂಗಸಾಗಿಯೇ ಉಳಿದೆ. ಬೆಳಗಿನೊಡನೆ ಉತ್ಕಟ ವ್ಯಗ್ರತೆಯ ಅವಧಿಯೂ ಮುಗಿದಿತ್ತು. ಅದರ ಯಾವ ಚಿನ್ಹವೂ ಇರಲಿಲ್ಲ ಅಂದೂ ನೀವು ಎರಡು ಮೂರು ತಿಂಗಳ ವರೆಗೆ ದೂರ ಪ್ರವಾಸಕ್ಕಾಗಿ ಹೋಗುವುದಾಗಿ ತಿಳಿಸಿದಿರಿ. ಆ ಆನಂದದ ಸಮಯದಲ್ಲಿ ಅವು ಶೂಲವಾಗಿ ಪರಿಣಮಿಸಿದವು. ಹಿಂದಿನ ದೆಲ್ಲ ನೆನಪಾಯಿತು. ಹಿಂದೆ ಕೂಡ ಹಾಗೆಯೇ ಹೇಳಿ ಮರೆತಿದ್ದಿರಿ. ನಿಮ್ಮ ಕಾಲ ಮೇಲೆ ಹೊರಳಾಡಿ ನನ್ನನ್ನು ಕರೆದುಕೊಂಡು ಹೋಗಲು ಕೇಳ ಬೇಕೆಂದುಕೊಂಡೆ. ಆದರೆ ಎದೆ ನಡುಗಿತು; ಧೈರ್ಯವಾಗಲಿಲ್ಲ. "

" ನಗುತ್ತ ನೀವು ಕೇಳಿದಿರಿ 'ನಿಜವಾಗಿಯೂ ನನಗೆ ದುಃಖವಾ ಯಿತೇ' ಎಂದು. ನನ್ನಿಂದ ತಡೆಯುವುದಾಗಲಿಲ್ಲ. ಎದ್ದುನಿಂತೆ. ಮುಖಕೆಳಗೆ ಮಾಡಿ ಧೈರ್ಯದಿಂದ ಹೇಳಿದೆ. 'ನಾನು ಯಾರನ್ನು ಪ್ರೀತಿಸುವೆನೋ ಅವನು ಯಾವಾಗಲೂ ಪ್ರವಾಸದಲ್ಲಿಯೇ ಇರುತ್ತಾನೆ. ನಗುತ್ತ ನನ್ನ ಕೆನ್ನೆಯ

ಮೇಲೆ ಮೃದುವಾಗಿ ಹೊಡೆದು ಹೇಳಿದಿರಿ. 'ಹುಚ್ಚಿ—ಮತ್ತೆ ಮರಳಿ ಬರುವ ದಿದೆಯಲ್ಲ' ಎಂದು. 'ಮರಳುವದೇನೋ ಇದೆ; ಆದರೆ ಮರಳಿದಾಗ ನನ್ನ ನೆನಪಿದ್ದರೆ ತಾನೆ?' ಎಂದೆ.

''ನನ್ನ ಮಾತಿನಿಂದ ನೀವು ವಿಮನಸ್ಕರಾದಿರಿ. ಹಿಂದಿನ ವಿಚಾರ ನಿಮ್ಮನ್ನು ಕೆಣಕಿತೇನೋ? ನನಲ್ಲಿ ಆಶೆಹುಟ್ಟಿತು. ನಿಧಾನವಾಗಿ ಎದ್ದು ನಿಂತು ನನ್ನ ಹೆಗಲ ಮೇಲೆ ಕೈ ಹಾಕುತ್ತ ಸಾವಕಾಶವಾಗಿ ಹೇಳಿದಿರಿ— 'ಒಳ್ಳೆ ವಸ್ತುವನ್ನು ಮರೆಯಲಾಗುವುದಿಲ್ಲ. ನಿನ್ನನ್ನೆಂದೂ ನಾನು ಮರೆಯು ಲಾರೆ.'

"ಆದರೂ ನೀವು ಗುರುತಿಸಿರಲಿಲ್ಲ. ಎಷ್ಟೊ ಗುರುತಿಸಲಿಲ್ಲ. ನಿಮ್ಮ ಕಣ್ಣುಗಳಲ್ಲಿ ನಾನು ಅಪರಿಚಿತಳಾಗಿಯೇ ಉಳಿದೆ—ಇಲ್ಲವಾದರೆ ನೀವೆಂದೂ ಆ ರೀತಿಯಾಗಿ ವರ್ತಿಸುತ್ತಿರಲಿಲ್ಲ. ನೀವು ಮತ್ತೊಮ್ಮೆ ನನ್ನನ್ನು ಆವೇಗ ದಿಂದ ಅಪ್ಪಿಕೊಂಡು ಮುತ್ತಿಟ್ಟಿರಿ. ಆ ಆವೇಗಕ್ಕೆ ನನ್ನ ಕೂದಲು ಕೆಟ್ಟುವು. ಕನ್ನಡಿಯಲ್ಲಿ ನೋಡಿಕೊಂಡು ಸರಿಮಾಡಿಕೊಳ್ಳುತ್ತಿದ್ದೆ. ನೀವು ಕಳ್ಳರಂತೆ ನನ್ನ ಪರ್ಸಿನಲ್ಲಿ ಎರಡು ನೋಟುಗಳನ್ನಿಡತೊಡಗಿದ್ದಿರಿ. ಅದನ್ನರಿತು ದುಃಖ ಉಕ್ಕಿ ಬಂತು. ಆದರೆ ಅಳುವುದಾಗಲಿಲ್ಲ. ಎರಡು ಬಿಗಿಯಲೇ ಎನ್ನಿಸಿತು. ಬಾಲ್ಯದಿಂದಲೂ ನಿಮ್ಮನ್ನು ಪ್ರೀತಿಸಿದವಳಿಗೆ ರೂಪಾಯಿಯ ಬಹುಮಾನ ಕೊಟ್ಟು ಕಡ ತೀರಿಸತೊಡಗಿದ್ದಿರಿ. ನಿಮ್ಮ ಮಗುವಿನ ತಾಯಿಗೆ ಇಂಥ ಪುರಸ್ಕಾರ ನಿಮ್ಮಿಂದ ಸಲ್ಲತೊಡಗಿತ್ತು!—ಕೇವಲ ಇಂದ್ರಿಯ ಸುಖ ಕ್ಕಾಗಿ ನಾನು ನಿಮ್ಮ ಭಾವನೆಯಲ್ಲಿ ಬೀದಿಯ ಬಸವಿಯಾಗಿದ್ದೆ.

"ಆಗ ಅಲ್ಲಿ ಒಂದು ಕ್ಷಣ ಕೂಡ ನಿಲ್ಲಲು ಮನಸ್ಸಾಗಲಿಲ್ಲ. ನನ್ನ ಮೇಲೆಯೇ ನನಗೆ ತಿರಸ್ಕಾರ ಹುಟ್ಟಿತು. ನನ್ನ ಹ್ಯಾಟ ಹುಡುಕ ತೊಡ ಗಿದೆ. ಅದು ಮೇಜಿನ ಮೇಲಿತ್ತು—ಹೂಗಳ ಬಳಿಯಲ್ಲಿ.

"ಇದರಲ್ಲಿಯ ಒಂದು ಹೂ ಕೊಡುವಿರಾ?' ಎಂದು ಕೇಳಿದೆ. ಯಾವ ಸಂಕೋಚವೂ ಇಲ್ಲದೆ ನೀವು ಒಂದು ಹೂ ಹೊರಗೆಳೆದಿರಿ. ನಾನು ತಕ್ಕೊ ಳ್ಳಲಿಲ್ಲ. ಮತ್ತೆ ಕೇಳಿದೆ. 'ಈ ಹೂಗಳು ನಿಮ್ಮನ್ನು ಪ್ರೀತಿಸುವ ಸ್ತ್ರೀಯಿಂದ ಕಾಣಿಕೆಯಾಗಿ ಬಂದಿರಬೇಕು. ಅಲ್ಲವೆ?'

‘‘ಇರಬಹುದು; ನನಗೇನೂ ಗೊತ್ತಿಲ್ಲ. ಯಾರಿಂದ–ಎಲ್ಲಿಂದ ಎಂದೇ ತಿಳಿದಿಲ್ಲ ಇದುವರೆಗೂ; ಅಂತೆಯೇ ಇವು ಬಹಳ ಬೇಕೆನಿಸುತ್ತಿವೆ.”

‘‘ನಿಮ್ಮ ಮುಖದ ಮೇಲೆ ಪೂರ್ಣ ದೃಷ್ಟಿ ಇಟ್ಟು ಹೇಳಿದೆ; ‘ಬಹಳ ಮಾಡಿ........ನೀವು........ಅವಳ....ನ್ನು ಮರೆತಿರಬಹುದು.’

‘‘ನಿಮಗೆ ಅಚ್ಚರಿಯಾಯಿತು. ಮತ್ತಷ್ಟು ಏಕಾಗ್ರತೆಯಿಂದ ನಾನು ನಿಮ್ಮನ್ನೇ ನೋಡುತ್ತಿದ್ದೆ. ನನ್ನ ಕಣ್ಣುಗಳು ಇೀಗಲಾದರೂ ಗುರುತಿಸಿರಿ’ ಎಂದು ಹೇಳುತ್ತಿದ್ದುವು ನಿಮ್ಮ ಮುಗುಳು ನಗೆಯಲ್ಲಿ ಸೌಹಾರ್ದತೆಯಿತ್ತು; ಸಂಸ್ಮರಣೆ ಇರಲಿಲ್ಲ. ನೀವು ಮತ್ತೊಮ್ಮೆ ಮುತ್ತಿಟ್ಟಿರಿ. ಆದರೂ ಗುರುತಿಸಿರಲಿಲ್ಲ

‘‘ಅಲ್ಲಿಂದ ಹೊರಗೆ ಓಡಿದೆ. ಕುತ್ತಿಗೆ ಕಟ್ಟಿ ನಿಂತಿತ್ತು. ಕಣ್ಣುಗಳು ತುಂಬಿ ಬಂದಿದ್ದುವು. ಓಡಿದೆ. ನನ್ನ ಕಣ್ಣೀರನ್ನು ನಿಮಗೆ ತೋರಿಸುವುದು ಬೇಕಾಗಿರಲಿಲ್ಲ. ಓಡುವ ಅವಸರದಲ್ಲಿ ನಿಮ್ಮ ಆಳಿಗೆ ಹಾಯುತ್ತಿದ್ದೆ. ಅವನು ತೀವ್ರವೇ ಸರಿದು ಹೊರಬಾಗಿಲು ತೆರೆದ. ಹೋಗುತ್ತ ನೀರುದುಂಬಿದ ಕಣ್ಣುಗಳಿಂದ ಅವನನ್ನೊಮ್ಮೆ ನೋಡಿದೆ ಅವನ ಮುಖ ಕಳೆದುಂಬಿತು. ಅವನು ನನ್ನನ್ನು ಗುರುತಿಸಿದ! ಬಾಲ್ಯದಲ್ಲಿ ಒಮ್ಮೆ ಮಾತ್ರ ನೋಡಿದ್ದರೂ ಅವನು ನನ್ನನ್ನು ಗುರುತಿಸಿದ! ಕೃತಜ್ಞತೆಯಿಂದ ನನ್ನ ಎದೆ ತುಂಬಿ ಬಂತು. ಅವನ ಕಾಲ ಮೇಲೆ ಹೊರಳಾಡಲೇ ಎನ್ನಿಸಿತು. ನೀವಿಟ್ಟ ಎರಡೂ ನೋಟುಗಳನ್ನು ತೆಗೆದು ಅವನ ಕೈಲಿಟ್ಟು ಓಡಿದೆ.

‘ನಮ್ಮ ಮಗು, ನಮ್ಮಿಬ್ಬರ ಸಂತಾನ ನಿನ್ನೆ ಕೈ ಬಿಟ್ಟಿತು. ಈ ವಿಶಾಲ ಜಗತ್ತಿನಲ್ಲಿ ಇೀಗ ನನಗಾಗಿ ಯಾರೂ ಇಲ್ಲ. ನೀವೊಬ್ಬರಿರುವಿರಿ—ಆದರೂ ಇಲ್ಲದಂತೆ. ನಿಮ್ಮ ಹಾದಿಯ ಮೇಲೆ ಅಡ್ಡ ಬಿದ್ದರೂ ನೀವು ನನ್ನನ್ನು ನೋಡದೆ ಮುಂದೆ ಹೋದಿರಿ–ನನ್ನನ್ನು ಅನಂತ ನಿರೀಕ್ಷಣೆಯಲ್ಲಿ ನೂಕಿ....! ಮಗುವಿನ ರೂಪದಲ್ಲಿ ನಿಮ್ಮನ್ನು ಪಡೆದಿದ್ದೇನೆ ಎಂಬ ಸಮಾಧಾನವಿತ್ತು. ಅದೂ ಕಡಿದು ಬಿತ್ತು. ಎಷ್ಟಾದರೂ ನಿಮ್ಮ ಮಗು ನಿಮ್ಮ ಗುಣಗಳ ಪ್ರತಿ ರೂಪ! ಅಂತೆಯೇ ಇರಬಹುದು, ಅದೂ ಕೂಡ ನನ್ನನ್ನು ತ್ಯಜಿಸಿ ಚಿರ ಪ್ರವಾಸವನ್ನು ಕೈಕೊಂಡಿತು—. ನನ್ನನ್ನು ಮರೆತು ಬಿಟ್ಟಿತು. ಈಗ ನನ್ನ

ಬಳಿಯಲ್ಲಿ ನಿಮ್ಮದೆನ್ನುವದೇನೂ ಇಲ್ಲ—ಮಗುವಿಲ್ಲ—ನೀವು ಬರೆದ ಒಂದು ಸಾಲು, ಒಂದಕ್ಕರ ಕೂಡ ಇಲ್ಲ."

"ನಿಮ್ಮನ್ನು ನಾನು ದೂಷಿಸುವದಿಲ್ಲ. ನಿಮ್ಮ ಸುಖಮಯ ಜೀವನ ದಲ್ಲಿ ನನ್ನ ವಿಷಾದ ಜೀವನದ ಛಾಯೆಯನ್ನು ಹರಡುವ ಇಚ್ಛೆ ನನಗಿಲ್ಲ. ಅಂಜಬೇಡಿರಿ. ನಾನಿನ್ನೆಂದೂ ನಿಮಗೆ ತೊಂದರೆ ಕೊಡದಂತೆ ಹೊರಟು ಹೋಗುತ್ತಿದ್ದೇನೆ. ಈ ಭಯಾನಕಗಳಿಗೆಯಲ್ಲಿ ಎದುರು ಕರುಳಿನ ತುಣುಕು ಕತ್ತರಿಸಿ ಬಿದ್ದಾಗ ಸುಮ್ಮನಿರುವುದಾಗಲಿಲ್ಲ. ಇಷ್ಟು ದಿವಸ ಮುಚ್ಚಿಟ್ಟದೆಲ್ಲ ವನ್ನೂ ಎದೆ ಸೀಳಿ ಇದೀಗ ನಿಮ್ಮ ಮುಂದಿಟ್ಟಿದ್ದೇನೆ. ಇದನ್ನು ಓದುವದರಿಂದ ನಿಮಗೆ ಕಷ್ಟವೆನಿಸಿದ್ದರೆ ನನ್ನನ್ನು ಕ್ಷಮಿಸಿರಿ. ಈ ಪತ್ರವನ್ನು ಕಂಡು ನೀವು ನನ್ನ ಬಳಿಗೆ ಬಂದರೆ ಮೊದಲನೆಯ ಸಲ ಕಿವುಡಿಯಾಗಿರುತ್ತೇನೆ. ನನ್ನ ಚಿರನಿದ್ರೆಯಲ್ಲಿ ನಿಮ್ಮ ಕರೆಗೆ ಓಗೊಡಲಾರೆ! ಇಂಥ ಅಪರಾಧವಾಗ ದಂತೆ ನೋಡಿಕೊಂಡಿದ್ದೇನೆ-ನನ್ನ ಜೀವನವೆಲ್ಲ! ಈಗಲೂ ಆಗಬಾರದು. ನನ್ನ ಭಾವಚಿತ್ರವಾಗಲಿ—ಅಥವಾ ನನ್ನ ನೆನಪಿಗೆಂದು ಯಾವ ವಸ್ತುವನ್ನಾ ಗಲೀ ನಾನು ಬಿಟ್ಟು ಹೋಗುತ್ತಿಲ್ಲ. ನೀವು ನನ್ನನ್ನು ಎಂದೆಂದೂ ಇನ್ನೆಂದೆಂದಿಗೂ ಗುರುತಿಸಲಾರಿರಿ.

"ಹೆಚ್ಚಿಗೆ ಬರೆಯಲಾರೆ........ತಲೆ ಭಾರವಾಗತೊಡಗಿದೆ. ಮೈ ಕಾದು ಕೆಂಡವಾಗಿದೆ........ಎಲುವುಗಳೆಲ್ಲವನ್ನೂ ಹಿಂಡಿದಂತೆನ್ನಿಸುತ್ತದೆ........ಶಕ್ತಿ ಉಡುಗಿ ಕೈಯಲ್ಲಿಯ ಪೆನ್ನು ಕಳಚಿ ಬೀಳತೊಡಗಿದೆ....ಹಾಸಿಗೆಗೆ ಹೋಗುವೆ. ಇನ್ನು ಎಲ್ಲವೂ ಬೇಗನೆ ಮುಗಿಯುಬಹುದು. ಮುಗಿದರೆ ಒಳ್ಳೇದು ನನ್ನ ಮಗುವನ್ನು ಎತ್ತುವದನ್ನು ನಾನು ನೋಡಲಾರೆ .... .... ! ಅಷ್ಟರಲ್ಲೆ, ಕ್ಷಣಗಳವಧಿಯಲ್ಲಿ ಜೀವನದ ಆಚೆಯ ದಂಡೆ ತಾಗಲಿದೆ.

"ಇನ್ನು ಬರೆಯುವದಾಗುವದಿಲ್ಲ........ಬರೆಯುವದಾಗುವದಿಲ್ಲ. ಆದ ದ್ದೆಲ್ಲವೂ ಒಳಿತೇ ಆಯಿತು........ಕೊನೆಯ ಉಸುರಿನ ವರೆಗೆ ಕೃತಜ್ಞಳಾಗಿ ರುವೆ—ನಿಮ್ಮ ಉಪಕಾರಕ್ಕಾಗಿ. ನನ್ನದೆಲ್ಲವನ್ನೂ ನೀವು ಕೇಳಿದಿರಲ್ಲವೇ! ಅಷ್ಟೇ ಸಾಕು. ಈ ಪ್ರೇಯಸಿಯ ಮೃತ ಆತ್ಮದ ಸಂತುಷ್ಟಿಗೆ!

"ಓ! ನಿಮ್ಮ ಹುಟ್ಟು ಹಬ್ಬಕ್ಕೆ ಇನ್ನಾರು ನಿಮಗೆ ಹೂ ಕಳಿಸುವರು? ನನ್ನ ಜೀವನದ ಮಹತ್ವದ ದಿನದಂದು ನಿಮ್ಮ ಹೂಜಿ ಹೂವಿಲ್ಲದೆ ಬರಿದಾ

ಗಿರಬೇಕೆ?........ನನ್ನದೊಂದು ಬೇಡಿಕೆ—ಪ್ರಥಮ ಹಾಗೂ ಅಂತಿಮ.... ನಿಮ್ಮ ಹುಟ್ಟಿದ ದಿನದಂದು ಹೂ ಕೊಂಡುಕೊಳ್ಳುವದನ್ನು ಮರೆಯಬೇಡಿರಿ.... ನನ್ನ ಆತ್ಮ ಶಾಂತಿಗಾಗಿ ದೇವನಲ್ಲಿ ಪ್ರಾರ್ಥನೆ ಮಾಡುವುದು ಬೇಕಾಗಿಲ್ಲ. ದೇವರಲ್ಲಿ ಎಳ್ಳಷ್ಟೂ ವಿಶ್ವಾಸವಿಲ್ಲ ನನಗೆ. ನಿಮ್ಮಲ್ಲಿ ನನಗೆ ಸಂಪೂರ್ಣ ನಂಬಿಗೆಯಿದೆ. ವರ್ಷದಲ್ಲಿ ಒಂದು ದಿವಸ ಹೂವಿನರೂಪದಿಂದ ನಿಮ್ಮ ಜೊತೆಯಲ್ಲಿರಲು ಬಯಸುತ್ತೇನೆ. ಇದೇ ನನ್ನ ಕೊನೆಯ ಬೇಡಿಕೆ—ಮರೆಯಬೇಡಿರಿ—ಅಪ್ಪಣೆಯೆ........ಬರುವೆ........''

× × × ×

ಪತ್ರ ಅವರ ಕೈಯಿಂದ ಜಾರಿಬಿತ್ತು; ಬಹಳ ಹೊತ್ತಿನ ವರೆಗೆ ಅವರು ಯೋಚಿಸುತ್ತ ಕುಳಿತರು. ಮಸುಕು—ಮಸುಕಾಗಿ ಹಿಂದಿನ ಚಿತ್ರ ಕಾಣ ತೊಡಗಿತು !

ಮೇಜಿನ ಕಡೆ ನೋಡಿದರು ಹೂಜಿ ಬರಿದಾಗಿ ನಿಂತಿತ್ತು. ಎಷ್ಟೋ ವರ್ಷಗಳಿಂದ ಅವರ ಜನ್ಮದಿನನಂದು ಅದು ಎಂದೂ ಬರಿದಾಗಿರಲಿಲ್ಲ. ನಗುತ್ತಿದ್ದ ಹೂ ಇಂದು ಇರಲಿಲ್ಲ. ಅವರ ಹೃದಯ ಕಂಪಿಸಿತು. ದೂರದ—ಎರಡನೆಯ ಲೋಕದ ಸುಳಿಗಾಳಿ ಮೆಲ್ಲನೆ ಬೀಸಿ ಅವರಿಗೆ ಮೃತ್ಯು, ಮೃತ್ಯು ರಹಿತ ಪ್ರೇಮದ ಸೂಚನೆ ಕೊಡುತ್ತಿತ್ತು. ಎದೆಯ ಅಂತರಾಳದಲ್ಲಿ ತರಂಗಗಳೇಳ ತೊಡಗಿದವು. ದೂರದಿಂದ ಕೇಳ ಬರುವ ಗಾನಲಹರಿಯಂತೆ ಅವರ ಸ್ಮೃತಿ ಪಟಲದಲ್ಲಿ ಸತ್ತವಳ ನೆನಹು ಮೂಡಿ ಬರತೊಡಗಿತ್ತು........ ಪರಿಚಯದ ಪುನರಾವೃತ್ತಿ ಪರೆಯುಚ್ಚುತ್ತಿತು.

(" A Letter from Unknown Woman " ಎಂಬ ಕತೆಯಿಂದ)



# ೬

# ಅವಳ ಗಂಡ

—✥—

೧೯೧೮ರ ಬೇಸಗೆಯ ರಾತ್ರಿ. 'ಲೇಕ್‌ಜಿನೆವ್ಹಾ'ದ ಸ್ತಬ್ಧತೆಯಲ್ಲಿ ಹೊರಟ ಮೀನುಗಾರನಿಗೆ ನೀರಿನ ಮೇಲೆ ಏನೋ ವಿಚಿತ್ರ ವಸ್ತು ಹರಿಯುತ್ತಿರುವುದು ಕಂಡು ಬಂದಿತು. ಬೆತ್ತಲೆ ಮನುಷ್ಯನೊಬ್ಬ ಒಣಗಿದ ಕಟ್ಟಿಗೆ ತುಂಡುಗಳ ಮೇಲೆ ಕುಳಿತು ಕೈಯಿಂದ ಹುಟ್ಟು ಹಾಕುತ್ತಿದ್ದ. ಚಳಿ ವಿಪರೀತವಾಗಿತ್ತು. ಅದೇನೆಂದು ತಿಳಿಯಲು ಅಲ್ಲಿಗೆ ಹೋದ ಮೀನುಗಾರನಿಗೆ ಅವನ ಸ್ಥಿತಿ ಕಂಡು ಮರುಕ ಮೂಡಿತು. ಕೈ ಆಸರೆ ಕೊಟ್ಟು ಅವನನ್ನು ತನ್ನ ದೋಣಿಯಲ್ಲಿ ಎಳೆದು ಕೊಂಡನು. ಅವನನ್ನು ಚಳಿಯಿಂದ ರಕ್ಷಿಸಲು ಮೀನಗಾರನ ಬಳಿ ಮೀನ ಹಿಡಿಯಲು ಇಟ್ಟ ಬಲೆಗಳ ಹೊರತಾಗಿ ಅವನಲ್ಲಿ ಏನೂ ಇರಲಿಲ್ಲ. ಮೀನುಗಾರ ಅದರಿಂದಲೇ ಅವನನ್ನು ಸುತ್ತಿ ಅವನ ಯೋಗಕ್ಷೇಮ ಕೇಳಿ ನೋಡಿದ. ದೋಣಿಯ ತಳದಲ್ಲಿ ಮುದುಡಿಕೊಳ್ಳುತ್ತಿದ್ದ ಆ ವ್ಯಕ್ತಿ ಏನೋ ಹೇಳಿತು. ಅದರ ಒಂದಕ್ಷರವೂ ಇವನಿಗೆ ಅರ್ಥವಾಗಲಿಲ್ಲ. ಕೊನೆಗೆ ಮಾತು ಅಸಾಧ್ಯವೆನಿಸಿದಾಗ ದಂಡೆಯ ಕಡೆ ಹುಟ್ಟು ಹಾಕುವುದಕ್ಕೆ ತೊಡಗಿದ. ದಡ ಕಂಡ ಕೂಡಲೆ ಆ ಬೆತ್ತಲೆ ಮನುಷ್ಯನ ಮುಖದಲ್ಲಿ ಗೆಲುವು ಮೂಡಿತು. ದೋಣಿಯನ್ನು ದಡದಲ್ಲಿ ಕಟ್ಟಿ ಮೀನುಗಾರ ಹೊರಟು ಹೋದನು. ರಾತ್ರಿಯೆಲ್ಲ ಹಿಡಿದ ಮೀನುಗಳನ್ನು ಕೆಳಗಿಳಿಸಲು ಬಂದ ಮೀನುಗಾರನ ಮನೆಯ ಹೆಂಗಸರು ಮೀನುಗಳ ಬದಲಾಗಿ ಮನುಷ್ಯನನ್ನು ಕಂಡು ಹೌಹಾರಿದರು. ಅದೂ ಬೆತ್ತಲೆ ಮನುಷ್ಯನನ್ನು! ಸುದ್ದಿ ಗಾಳಿಯಾಗಿ ಊರಲ್ಲೆಲ್ಲ ಹಬ್ಬಿತು. ಜನರು ತಂಡ ತಂಡವಾಗಿ ನೋಡಲು ಬಂದರು. ಆದರೆ ಭಾಷೆ ಒಂದು ದೊಡ್ಡ ತೊಡಕಾಗಿ ನಿಂತಿತು. ಅವರೇನು ಕೇಳುತ್ತಿದ್ದರೋ ಏನೋ. ಆದರೆ ಎಲ್ಲದಕ್ಕೂ ಅವನ ಉತ್ತರ ಒಂದೇ! 'ರೋಸಿಯಾ! ರೋಸಿಯಾ!' ಪ್ರತಿ ಸಲವೂ ಧ್ವನಿಯಲ್ಲಿ

ಬದಲಾವಣೆಯಾಗುತ್ತಿತ್ತು. ಬೇಸತ್ತ ಅಧಿಕಾರಿ ಸನ್ನೆಯಿಂದ ತನ್ನನ್ನು ಹಿಂಬಾಲಿಸಲು ಸೂಚಿಸಿ ಆಫೀಸಿನ ಕಡೆ ಹೊರಟ. ಸುತ್ತಲೂ ನೆರೆದು ತನ್ನನ್ನು ಒಂದು ವಿಚಿತ್ರಪ್ರಾಣಿಯಂತೆ ನೋಡುತ್ತಿದ್ದವರ ನೋಟದಿಂದಲೂ ಅಧಿಕಾರಿಯ ದರ್ಪದಿಂದಲೂ ಅವನು ಅಂಜಿಕೊಂಡು, ಅವನು ಸೂಚನೆಯಂತೆ ಅಧಿಕಾರಿಯನ್ನು ಹಿಂಬಾಲಿಸಿದ. ಕಚೇರಿ ಸೇರಿದ ಮೇಲೆ ಅವನನ್ನು ಬಂಧನದಲ್ಲಿಡಲಾಯಿತು. ಆದರೆ ಯಾವ ರೀತಿಯಿಂದಲೂ ಅವನು ವಿರೋಧಿಸಲಿಲ್ಲ. ವಿರೋಧಿಸುವ ಮಾತಿರಲಿ ಒಂದು ಶಬ್ದವನ್ನೂ ಕೂಡ ನುಡಿಯಲಿಲ್ಲ. ಇಷ್ಟು ಮಾತ್ರ ನಿಜ. ಗೆಲುವಿನಿಂದ ಕೂಡಿದ ಮುಖ ಮತ್ತೆ ಚಿಂತೆಯಿಂದ ನಿಸ್ತೇಜವಾಯಿತು.

ಅವನನ್ನು ಕಾವಲಲ್ಲಿರಿಸಿದ ಸುದ್ದಿ ಸುತ್ತಲೂ ಇದ್ದ ಹೋಟೆಲುಗಳಲ್ಲಿ ಗಾಳಿಯಾಗಿ ಹಬ್ಬಿತು. ಕೆಲಸವಿಲ್ಲದ ಎಷ್ಟೋ ಜನರು ಹೊತ್ತು ಕಳೆಯಲು ಸಾಧನವಾಯ್ತೆಂದು ಹಿಗ್ಗಿ ಅವನ ಕಡೆ ನಡೆದರು. ನೆರೆದ ಜನರಲ್ಲಿದ್ದ ಹೆಂಗಸೊಬ್ಬಳು ಅವನಿಗೆ ಮಿಠಾಯಿ ಕೊಡಲು ಹೋದಳು. ಆದರೆ ಅವನು ತಲೆಯಲ್ಲಾಡಿಸಿ ನಿರಾಕರಿಸಿದ. ಕೈಯಲ್ಲಿ ಕ್ಯಾಮರಾ (Camera) ಹಿಡಿದು ಕಾಮನಂತೆ ಅಲೆದಾಡುತ್ತಿದ್ದ ತರುಣನೊಬ್ಬನು ಅವನ ಫೋಟೊ ತೆಗೆಯುವುದರಲ್ಲಿ ತನ್ನ ಮನರಂಜನೆಯನ್ನು ಕಂಡುಕೊಂಡ. ನೆರೆದ ಜನಕ್ಕೆ ಮಾಡಲು, ಮಾತಾಡಲು ಒಂದು ಹಾದಿ ಇರಲಿಲ್ಲ. ಒಂದು ಮುಖವಿರಲಿಲ್ಲ. ಜನರು ಗೊಳ್ಳೆಂದು ನಗುತ್ತಿದ್ದರು. ಕೊನೆಗೊಮ್ಮೆ ಇದೆಲ್ಲದರ ಕೊನೆಯಾಗುವ ಸಮಯ ಬಂದಿತು. ಬಹಳ ಭಾಷೆಗಳನ್ನು ಬಲ್ಲವನೆಂದು ಹೆಸರಾದ ಮ್ಯಾನೇಜರನೊಬ್ಬನು ಅವನನ್ನು ಮಾತನಾಡಿಸಲು ಮುಂದೆ ಬಂದನು. ಜರ್ಮನ್, ಇಟಾಲಿಯನ್, ಇಂಗ್ಲೀಷು, ರಸಿಯನ್ ಎಲ್ಲ ಭಾಷೆಗಳಲ್ಲಿಯೂ ಅವನ ಹೆಸರು ಕೇಳಿ ನೋಡಿದನು. ರಸಿಯನ್‌ದ ಮೊದಲನೆಯ ಅಕ್ಷರ ಕಿವಿಗೆ ಬಿದ್ದಾಗ ಆ ಮನುಷ್ಯನ ಹೃದಯ ತುಂಬಿ ಬಂದಿತು. ಅವನು ತನ್ನ ಕತೆಯೆಲ್ಲವನ್ನೂ ಹೇಳಿದ. ಎಷ್ಟೋ ಕಡೆ ತಿಳಿಯುತ್ತಿರಲಿಲ್ಲ. ಇನ್ನೆಷ್ಟೋ ಕಡೆ ಭಾಷಾಂತರಿಸಲು ಕಠಿಣವಾಗುತ್ತಿತ್ತು. ಒಟ್ಟಾರೆ ಆ ಕತೆ ಹೀಗಿತ್ತು:—

‘ಅವನು ರಸಿಯದಲ್ಲಿ ಯುದ್ಧ ಮಾಡುತ್ತಿದ್ದನಂತೆ. ಒಂದು ದಿನ ಅವನನ್ನೂ ಉಳಿದ ಇನ್ನೂ ಸಾವಿರ ಜನರನ್ನೂ ಟ್ರೇನಿನಲ್ಲಿ ಕೂಡಿಸಿ ಎಷ್ಟೋ

ದೂರ ಕರೆದೊಯ್ದರು. ಅವನಿಗೆ ಗೊತ್ತಿರಲಿಲ್ಲ. 'ಟ್ರೇನಿ'ನ ಪ್ರವಾಸ ಮುಗಿದ ಕೂಡಲೆ ಹಡಗದ ಪ್ರವಾಸ. ಎಷ್ಟೋ ದಿನಗಳ ವರೆಗೆ ಅವರು ಹಡಗದಲ್ಲಿಯೇ ಇದ್ದರು; ಕೊನೆಗೊಮ್ಮೆ ಅವರೆಲ್ಲರಿಗೆ ಮತ್ತೆ ನೆಲ ಕಾಣಿಸಿತು. ಹಡಗ ಇಳಿದ ಕೂಡಲೆ ಮತ್ತೆ ಕೆಲವು ದಿನಗಳ ವರೆಗೆ 'ಟ್ರೇನಿ'ನಲ್ಲಿ ಪ್ರವಾಸ ಮಾಡಿದರು. ಅಲ್ಲಿಂದ ಅವರೆಲ್ಲರನ್ನು ಒಂದು ಪರ್ವತದ ಮೇಲೆ ಯುದ್ಧ ಮಾಡಲು ಹೇಳಿದರು. ಮೊದಲಲ್ಲೇ ಕಾಲಿಗೆ ಗುಂಡು ತಾಕಿದ್ದುದರಿಂದ ಅವನಿಗೆ ಆನಂತರದ ಯುದ್ಧ ಸಮಾಚಾರವೇನೂ ಗೊತ್ತಿರಲಿಲ್ಲ.'

ನೆರೆದ ಜನರಿಗೆ ಆಗಲೇ ಅವನು ರಶಿಯನ್ ಸೈನಿಕನೆಂಬ ಕಲ್ಪನೆ ಬಂದು ಬಿಟ್ಟಿತ್ತು. ಆದರೆ ಇಂತಹ ವಿಚಿತ್ರ ಸ್ಥಿತಿಯಲ್ಲಿ ಮೈಮೇಲೆ ಬಟ್ಟೆಯಿಲ್ಲದೆ, ಕೂಡಲು ದೋಣಿಯಿಲ್ಲದೆ ಜೀವದ ಪರವೆಯನ್ನು ಬಿಟ್ಟು ಹೊರಡಲು ಕಾರಣವೇನಿರಬಹುದೆಂದು ತಿಳಿಯಲು ಅವರೆಲ್ಲರೂ ಕುತೂಹಲಿಗಳಾಗಿದ್ದರು.

ಹೇಳುತ್ತಿದ್ದಂತೆಯೇ ಮುಗುಳು ನಗೆಯೊಂದು ಅವನ ಒಣಗಿದ ತುಟಿಯ ಮೇಲೆ ಹಾದು ಹೋಯಿತು. ಆಸ್ಪತ್ರೆಯ ಮಂಚದ ಮೇಲಿದ್ದಾಗಲೇ ರಶಿಯಾ ಎಲ್ಲಿದೆಯೆಂದು ಅವನು ಅಲ್ಲಿದ್ದವರನ್ನೆಲ್ಲಾ ಕೇಳಿದ್ದ. ಅವನಿಗೆ ರಶಿಯಾ ಇದ್ದ ದಿಕ್ಕು ತೋರಿಸಲಾಗಿತ್ತು. ಗುಂಡಿನ ಗಾಯ ಮಾದು ನಡೆಯಲು ಬಂದ ಕೂಡಲೆ ಅವನು ಒಂದು ರಾತ್ರಿ ಯಾರ ಕಣ್ಣಿಗೂ ಬೀಳದಂತೆ ಆಸ್ಪತ್ರೆಯಿಂದ ಹೊರಬಿದ್ದು ತೋರಿಸಿದ ದಿಕ್ಕನ್ನು ಅನುಸರಿಸಿ ಹೊರಟ. ಹಗಲೆಲ್ಲ ಎಲ್ಲೆಲ್ಲೂ ಕಾವಲವಿರುತ್ತಿದ್ದ ಸೈನಿಕರ ಕಣ್ಣು ತಪ್ಪಿಸಲು ಎಲ್ಲಿಯಾದರೂ ಅಡಗಬೇಕು. ರಾತ್ರಿಯಾದ ಕೂಡಲೆ ಮತ್ತೆ ಹಾದಿ ಹಿಡಿಯಬೇಕು. ದಾರಿಯಲ್ಲಿ ದೊರಕುತ್ತಿದ್ದ ಹಣ್ಣು ಹಂಪಲ, ಗಡ್ಡೆಗೆಣಸುಗಳೇ ಹೊಟ್ಟೆಗೆ ಆಧಾರವಾಗುತ್ತಿದ್ದವು. ಹತ್ತು ರಾತ್ರಿ ಹೀಗೆ ನಡೆದ ಮೇಲೆ ಅವನು 'ಲೇಕ್ ಜಿನೇವ್ಹಾದ' ದಡ ಮುಟ್ಟಿದ್ದ. ಅವನು ಸೈಬೇರಿಯದ ಒಬ್ಬ ಒಕ್ಕಲಿಗ. 'ಲೇಕ್ ಬಯಕಲ್'ದ ತಳ ಅವನ ಊರು. ಅಂತೆಯೇ ಲೇಕ್ ಜಿನೆವ್ಹಾದ ಎರಡನೆಯ ದಂಡೆ ರಶಿಯ ಇರಬಹುದೆಂದು ಅವನು ಊಹಿಸಿದ್ದ. ಅದಕ್ಕಾಗಿಯೇ ಎರಡು ಕಟ್ಟಿಗೆಗಳನ್ನು ಕದ್ದು ಅದರ ಮೇಲೆ ಕುಳಿತು ಎರಡನೆಯ ದಂಡೆಗೆ ಹೊರಟಾಗಲೇ ಮೀನುಗಾರನ ಕಣ್ಣಿಗೆ ಬಿದ್ದು ಇಷ್ಟೆಲ

ಹೇಳಿ—ನಾನು ನಾಳೆಯಷ್ಟರಲ್ಲಿ ನನ್ನ ಊರು ಸೇರಬಹುದೇ ?' ಎಂದು ಅಲ್ಲಿದ್ದವರನ್ನು ಆಶೆಯಿಂದ ಕೇಳಿ ತನ್ನ ಕತೆ ಮುಗಿಸಿದ.

ಅವನ ಪ್ರಶ್ನೆ ನೆರದ ಜನರಲ್ಲಿ ನಗೆಯ ಬುಗ್ಗೆಯನ್ನೆಬ್ಬಿಸಿತು. ಮೊದ ಮೊದಲು ಎಷ್ಟೋ ಜನ ಅವನನ್ನು ಹುಚ್ಚನೆಂದರು. ಆದರೆ ತೀವ್ರವೇ ಅವನ ಮನಸ್ಥಿತಿಯನ್ನು ಕಂಡು ಹುಚ್ಚನೆಂದು ನಕ್ಕವರ ಎದೆಯಲ್ಲಿಯೂ ಮರುಕ ಮೂಡಿತು.

ಅವನನ್ನೇನು ಮಾಡಬೇಕು—ಎಂಬುದು ಅಲ್ಲಿಯ ಅಧಿಕಾರಿಯ ತಲೆ ತಿನ್ನ ತೊಡಗಿತು. ಕೆಲವರು ಅವನನ್ನು ರಶಿಯದ ರಾಯಭಾರಿಯ ಕಡೆ ಕಳಿಸಬೇಕೆಂದು ಹೇಳಿದರೆ ಇನ್ನೂ ಕೆಲವರು ಅವನನ್ನು ಫ್ರಾನ್ಸಿಗೇನೇ ಮರಳಿಸಬೇಕೆಂದು ಅಭಿಪ್ರಾಯ ಪಟ್ಟರು. 'ಅವನನ್ನು ಯಾವ ರೀತಿ ಯಾಗಿ ಕಾಣಬೇಕು. ಒಬ್ಬ ತಪ್ಪಿಸಿಕೊಂಡ ವ್ಯಕ್ತಿಯಂತೆಯೋ ? ಅಥವಾ ಪರಿಚಯವಿಲ್ಲದ ಒಬ್ಬ ವಿದೇಶಿಯಂತೆಯೆ ? "ಇದೊಂದು ಕಠಿಣ ಸಮ ಸ್ಯೆಯೇ !" ಎಂದು ಪೋಲೀಸ್ ಅಧಿಕಾರಿ ಹೇಳುತ್ತಿದ್ದ. ಇದಲ್ಲದೆ ಅವನಿಗೆ ಅನ್ನ ಬಟ್ಟೆ ಹೇಗೆ ಮಾಡುವದು. ಸ್ಥಾನೀಯ ಸಂಗ್ರಹದಿಂದ ಅವನಿಗೆ ಏನೂ ಸಿಕ್ಕುವಂತಿರಲಿಲ್ಲ. ನೆರೆದವರಲ್ಲಿ ಯಾವನೋ ಒಬ್ಬನು 'ಅವನಿಂದ ಕೆಲಸ ತೆಗೆದುಕೊಳ್ಳಬೇಕು; ಅನ್ನ ಕೊಡಬೇಕು ಇಲ್ಲವೆ ಅವನನ್ನು ಹೊರಗೆ ಹಾಕಬೇಕು' ಎಂದರು. ಈ ಸೂಚನೆಯನ್ನು ಇಬ್ಬರು ಹೆಂಗಸರು ಬಲ ವಾಗಿ ಪ್ರತಿರೋಧಿಸಿದರು. ಇದೇ ತಿಕ್ಕಾಟದಲ್ಲಿದ್ದಾಗ ಯಾರೋ ಪುಣ್ಯಾ ತ್ಮರು ಆ ಭಾರ ತಾವು ಹೊರುವದಾಗಿಯೂ, ಅಲ್ಲಿಯ ವರೆಗೆ ಸಂಬಂಧಿಸಿದ ಅಧಿಕಾರಿಗಳು ರಶಿಯನ್ ರಾಯಭಾರಿಯೊಡನೆ ಮಾತಾಡಿ ಇದರ ನಿಷ್ಕರ್ಷೆ ಮಾಡಬೇಕೆಂತಲೂ ತಿಳಿಸಿದರು. ಗೊಂದಲವೆಬ್ಬಿಸಿದ ಅವನ ಸಮಸ್ಯೆ ಇಷ್ಟು ಸರಳ ರೀತಿಯಿಂದ ಕೊನೆಗೊಂಡದ್ದಕ್ಕಾಗಿ ಅಧಿಕಾರಿಗೆ ಸಂತೋಷವಾಯಿತು.

ಇಷ್ಟೆಲ್ಲ ಬಿಸಿಬಿಸಿಯಾದ ವಾದ ನಡೆಯುತ್ತಿದ್ದಾಗ ಅವನ ಕಣ್ಣು ಗಳೆರಡೂ ಹೋಟಲ್ ಮ್ಯಾನೇಜರನ ತುಟಿಯ ಮೇಲೆಯೇ ನಟ್ಟಿದ್ದವು. ತನ್ನ ದೈವದ ಬಗ್ಗೆ ಆದ ನಿಷ್ಕರ್ಷೆಯನ್ನು ಹೇಳಬಲ್ಲವನೆಂದರೆ ಅಲ್ಲಿ ನೆರೆದವ ರಲ್ಲಿ ಅವನೊಬ್ಬನೆ. ಅವನೇ ಹೇಳಬೇಕು; ಅವನೇ ಕೇಳಬೇಕು. ತನ್ನ

ಬರುವಿಕೆಯಿಂದಾಗಿ ಎದ್ದ ಗಲಾಟೆ ಇೀಗಾಗಲೇ ಮುಸುಕು ಮುಸುಕಾಗಿ ಅವನಿಗೆ ತಿಳಿಯ ತೊಡಗಿತ್ತು. ಒಂದೆಡೆ ಜನರ ಗುಜುಗುಜು, ಇನ್ನೊಂದೆಡೆ ಸಂಬಂಧಿಸಿದ ಅಧಿಕಾರಿಗಳ ಚರ್ಚೆ. ದೇವರೆದುರು ಕುಳಿತು ತನ್ನ ಮುರಿದ ದೈವಕ್ಕಾಗಿ ಬೇಡಿಕೊಳ್ಳುವ ಒಂದು ನಿಸ್ಸಹಾಯ ಹೆಣ್ಣಿನಂತೆ ಅವನು ಮ್ಯಾನೇಜರನ ಕಾಲ ಬಳಿ ನಮ್ರನಾಗಿ ಕುಳಿತುಕೊಂಡ. ಅವನ ಮುಖದಿಂದ ದೈನ್ಯತೆ ಒಸರುತ್ತಿತ್ತು. ಅದನ್ನು ಕಂಡು ನೆರೆದವರೆಲ್ಲರಿಗೂ ಮರುಕ ಹುಟ್ಟಿತು. ಮ್ಯಾನೇಜರ ಅವನನ್ನೆಬ್ಬಿಸುತ್ತ ತನ್ನಿಂದಾಗಬಹುದಾದ್ದೆಲ್ಲವನ್ನೂ ಯಾವ ಕಸರೂ ಉಳಿಯದಂತೆ ಮಾಡುವ ಭರವಸೆ ಕೊಟ್ಟನು. ಅವನನ್ನು ಕರೆದುಕೊಂಡು ಹೋಗಿ ಊಟ ಮಾಡಿಸಿ ಹಾಸಿಗೆ ಹಾಸಿ ಕೊಟ್ಟ ನಂತರ ಗೆಳೆತನದ ಪ್ರೇಮದಿಂದ ಅವನನ್ನು ಬೀಳ್ಕೊಂಡು ಹೋಟೆಲಿನ ಕಡೆ ಹೊರಟುಹೋದ.

ಆ ಮ್ಯಾನೇಜರ್ ಕಣ್ಮರೆಯಾದ ಕೂಡಲೇ ಅವನು ಮತ್ತೆ ಹುಚ್ಚನಂತಾದ. ಅಲ್ಲಿ ನೆರೆದವರೆಲ್ಲರೂ ಅವನ ಪಾಲಿಗೆ ಇದ್ದೂ ಇಲ್ಲದಂತಾಗಿದ್ದಿತು. ತನ್ನನ್ನು ಆಶ್ಚರ್ಯದಿಂದ ನೋಡುತ್ತ ನಿಂತವರ ನೋಟವನ್ನು ಲೆಕ್ಕಿಸದೆ ದೂರದ ಗುಡ್ಡದ ಮೇಲಿದ್ದ ಆ ಹೋಟೆಲಿನಲ್ಲಿ ಕಣ್ಮರೆಯಾಗುವವರೆಗೆ ಅವನು ಮ್ಯಾನೇಜರನ ಬೆನ್ನು ಹತ್ತಿದ. ಮ್ಯಾನೇಜರ್ ಕಣ್ಮರೆಯಾದ ಕೂಡಲೆ ಅವನಿಂದ ಮುಂದೆ ಕಾಲೆತ್ತುವದಾಗಲಿಲ್ಲ. ಯಾರೋ ಒಬ್ಬರು ಅವನನ್ನು ತಟ್ಟಿ ಮರಳಲು ಸೂಚಿಸಿದರು. ನಿರಾಶನಾಗಿ ಅವನು ತನ್ನ ವಾಸಸ್ಥಾನಕ್ಕೆ ಮರಳಿದ. ಪ್ರತಿಯೊಂದು ಕ್ಷಣವೂ ಅವನಿಗೆ ಭಾರವಾಗ ತೊಡಗಿತ್ತು. ಆ ಮುಂಜಾವನ್ನು ಅವನು ಹೇಗೆ ಕಳೆದನೋ ಏನೋ! ಊರ ಹುಡುಗರು ಬಾಲ್ಯಸಹಜ ಕುತೂಹಲದಿಂದ ಅವನ ಕೋಣೆಯಲ್ಲಿ ಇಣುಕುತ್ತಿದ್ದರು. ಗೇಲಿಯಾಡುತ್ತಿದ್ದರು. ಅವನು ಅದಾವುದನ್ನೂ ಲಕ್ಷಿಸಲಿಲ್ಲ. ಮಧ್ಯಾಹ್ನದ ಊಟದ ಸಮಯವಾಯಿತು. ಜನ ಮತ್ತೆ ಸೇರಿದರು. ಎಷ್ಟೋ ಮಾತನಾಡಿದರು ಆದರೆ ಅವನಿಗೇನು ತಿಳಿಯಬೇಕು! ಹುಚ್ಚನಂತಾಗಿ ಅವನು ಅವರನ್ನು ನೋಡುತ್ತಿದ್ದ. ಅಲ್ಲಿ ನೆರೆದಿದ್ದ ಅಪರಿಚಿತ ವ್ಯಕ್ತಿಗಳ ನಡುವೆ ಅವನು ಒಬ್ಬ ಅಪರಿಚಿತ ಎನ್ನುವ ಅರಿವಾಯ್ತು ಅವನಿಗೆ. ತನ್ನ ಈ ನಿಸ್ಸಹಾಯ ಸ್ಥಿತಿಗಾಗಿ ಅವನ ಮೈ ನಡುಗುತ್ತಿತ್ತು.

ಉಣ್ಣಲು ತುತ್ತೆತ್ತಿದ ಅವನ ಕೈನಡುಗುತ್ತಿತ್ತು. ಅವನ ಕಣ್ಣು ನೀರಾಡಿದವು. ಹನಿಯೊಂದು ದೊಪ್ಪೆಂದು ಮುಂದಿದ್ದ ಮೇಜಿನ ಮೇಲೆ ಬಿತ್ತು. ದೀನನಾಗಿ ಅವನು ಸುತ್ತಲೂ ನೋಡಿದ. ಅಲ್ಲಿದ್ದವರು ಇವನ ದೈನ್ಯತೆಯನ್ನು ಕಂಡು ಗಂಭೀರ ಭಾವವನ್ನು ತಳೆದರು. ಅವನ ಜೀವ ನಾಚಿಕೆಯಿಂದ ಮುದ್ದೆಯಾಯಿತು.

ಸಾಯಂಕಾಲದ ವರೆಗೆ ಅವನು ಅದೇ ಕೋಣೆಯಲ್ಲಿಯೇ ಇದ್ದ. ಜನ ಬಂದರು. ಹೋದರು. ಯಾರೂ ಅವನ ಕಡೆ ವಿಶೇಷ ಲಕ್ಷ್ಯಕೊಡಲಿಲ್ಲ. ಅವನಿಗೂ ಯಾರೂ ಬೇಕಾಗಿರಲಿಲ್ಲ. ಬೆಳಕಿಲ್ಲದ ಒಂದು ಮೂಲೆಯಲ್ಲಿ ತಲೆ ಕೆಳಗೆ ಹಾಕಿಕೊಂಡು ದಿನವೆಲ್ಲ ಸುಮ್ಮನೆ ಕುಳಿತು ಕಳೆದ. ಹೊತ್ತು ಮುಳುಗಿತು ಸುತ್ತ ಮಸುಕಾಯಿತು. ಆಗ ಅವನು ಮೆಲ್ಲನೆ ಹೊರಬಿದ್ದ. ಅವನು ಎದ್ದು ಹೋಗುವದನ್ನು ಯಾರೂ ನೋಡಲಿಲ್ಲ. ಮೂಕಪ್ರಾಣಿಯಂತೆ ಭಾರವಾದ ಹೆಜ್ಜೆ ಹಾಕುತ್ತ ಗುಡ್ಡದ ಮೇಲಿದ್ದ ಆ ಹೋಟಲಿನ ಕಡೆ ನಡೆದ. ಅವನಿಗೆ ಆ ಮ್ಯಾನೇಜರನನ್ನು ಕಾಣಬೇಕಿತ್ತು. ಆದರೆ ಎಲ್ಲೆಂದು ಹುಡುಕುವದು? ಯಾರನ್ನು ಕೇಳುವದು? ಕೇಳಬೇಕಾದರೂ ಹೇಗೆ? ತಲೆಯ ಮೇಲಿದ್ದ ಟೊಪ್ಪಿಗೆ ಕೈಯಲ್ಲಿ ಹಿಡಿದುಕೊಂಡು ಹೊರಬಾಗಿಲಲ್ಲೇ ನಿಂತುಬಿಟ್ಟ. ಒಮ್ಮೆಯಾದರೂ ಮ್ಯಾನೇಜರ್ ಹೊರಗೆ ಬಂದಾನಲ್ಲ—, ಎಂಬ ಆಶೆ ಅವನಿಗೆ. ಅವನ ಅರಿಯದ ಕಣ್ಣುಗಳು ದೈನ್ಯತೆಯಿಂದ ಸುತ್ತೆಲ್ಲ ನೋಡುತ್ತಿದ್ದುವು. ಸುಮಾರು ಒಂದು ಗಂಟೆ ಕಳೆಯಿತು. ಅಷ್ಟೊತ್ತು ಅವನು ಹಾಗೆಯೇ ಅಲುಗಾಡದೇ ನಿಂತ. ಬರುಹೋಗುವ ಜನ ಅವನನ್ನು ಲಕ್ಷಿಸಲಿಲ್ಲ. ಕೊನೆಗೆ ಹೋಟೆಲಿನ ಆಳುಗಳಲ್ಲೊಬ್ಬನು ಹೋಗಿ ಮ್ಯಾನೇಜರನನ್ನು ಕರೆತಂದನು ಮ್ಯಾನೇಜರನನ್ನು ಕಂಡ ಕೂಡಲೆ ಅವನ ಉದಾಸೀನ ಮುಖದ ಮೇಲೊಂದು ಆನಂದದಲಹರಿ ಸುಳಿದು ಮಾಯವಾಯಿತು.

ಹೋಟೆಲಿನ ಮ್ಯಾನೇಜರ ಮೃದುವಾಗಿ ಕೇಳಿದ:—

“ಏಕೆ ಬಂದೆ ಬೋರಿಸ್ ?” ಏನು ಬೇಕಿತ್ತು ?”

‘ನಾನು ನಿಮಗೆ ತೊಂದರೆ ಕೊಟ್ಟೆ. ಕ್ಷಮಿಸಿ. ನನಗೆ ಮತ್ತಿನ್ನೇನೂ ಬೇಕಿಲ್ಲ. ನಾನು ನಮ್ಮ ಊರಿಗೆ ಹೋಗಬಹುದೇನು? ಇಷ್ಟೇ ಹೇಳಿ.’

'ಹಾಂ ಹಾಂ! ಅವಶ್ಯವಾಗಿ ಹೋಗಬಹುದು' ಮ್ಯಾನೇಜರ್ ನಗುತ್ತ ಹೇಳಿದ.

' ಹಾಗಾದರೆ ನಾಳೆ ಹೋಗಲೆ? '

ಅವನ ಕೇಳಿಕೆಯಲ್ಲಿ ಎಲ್ಲಿಲ್ಲದ ಆತುರತೆ ಇತ್ತು. ನಿಸ್ಸಹಾಯತೆ ಇತ್ತು. ದೈನ್ಯತೆ ಇತ್ತು. ಅವನ ಈ ಆತುರವನ್ನು ಕಂಡು ಮ್ಯಾನೇಜರನ ಮುಖದ ಮೇಲಿದ್ದ ನಗೆ ಒಮ್ಮೆಲೆ ಮಾಯವಾಯಿತು. ಅವನು ಮೆಲ್ಲನೆ ಸಣ್ಣ ಹುಡುಗರಿಗೆ ಹೇಳುವಂತೆ ಹೇಳಿದ.

' ಇಲ್ಲಿ ಬೋರಿಸ್ ಈಗಲೇ ಇಲ್ಲ .... .... .... ಯುದ್ಧ ಮುಗಿಯುವ ವರೆಗೆ ನೀನು ಹೋಗಬಾರದು ! '

' ಯುದ್ಧ ಮುಗಿಯುವವರೆಗೆ ! ಎಂದು ಮುಗಿಯುವದು ಯುದ್ಧ? '

' ಯಾರು ಹೇಳಬೇಕು. ದೇವರಿಗೇ ಗೊತ್ತು ಎಂದು ಮುಗಿಯುವ ದೆಂದು. '

' ಹಾಗಾದರೆ ನಾನು ಅದುವರೆಗೆ ಇಲ್ಲಿಯೇ ಇರಬೇಕೇನು? ಅದ ಕ್ಕಿಂತ ಮೊದಲು ಹೋಗಲು ಬರುವದಿಲ್ಲವೆ? '

' ಇಲ್ಲ ಬೋರಿಸ್ ಬರುವದಿಲ್ಲ.'

' ನಮ್ಮೂರು ಬಹಳ ದೂರವಿದೆಯೇನು ? '

' ಹೌದು. '

' ಎಷ್ಟು ದೂರ. ಒಂದು ಎಂಟು ದಿನಗಳ ಹಾದಿ ಇದೆಯೆ ? '

' ಇಲ್ಲ ಬೋರಿಸ್. ಬಹಳ ಬಹಳ ದಿನಗಳ ಹಾದಿ ಅದು. '

' ಇರಲಿ. ನಾನು ನಡೆಯ ಬಲ್ಲೆ. ನಡೆಯುವದಕ್ಕೆ ನಾನು ದಣಿಯು ತ್ತೇನೆಂದು ತಿಳಿದಿರೇನು ? ನನ್ನ ಕಾಲಲ್ಲಿ ಶಕ್ತಿ ಇದೆ. ಅವು ನೋಯು ವದಿಲ್ಲ. '

' ಆದರೂ ನೀನು ಹೋಗಲಾರೆ ಬೋರಿಸ್. ನಿನ್ನ ಮನೆ ಮುಟ್ಟ ಬೇಕಾದರೆ ನೀನು ಇನ್ನೊಂದು ರಾಜ್ಯದ ಗಡಿ ದಾಟಬೇಕಾಗುತ್ತದೆ.'

' ಗಡಿ ದಾಟಬೇಕಾಗುತ್ತದೆಯೆ ? ' ಅವನು ಆಶ್ಚರ್ಯದಿಂದ ಮ್ಯಾನೇ ಜರನ ಕಡೆ ನೋಡಿದ. ಈ ಗಡಿ ಎನ್ನುವ ಶಬ್ದಕ್ಕೆ ಅವನಲ್ಲಿ ಯಾವ ಅರ್ಥವೂ ಇರಲಿಲ್ಲ

'ಹಾಗಾದರೆ ನಾನು ಅವನ್ನು ಇೀಜಿ ದಾಟುತ್ತೇನೆ.' ಅವನು ತನ್ನ ಎದೆ ತಟ್ಟಿಕೊಂಡು ಹೇಳಿದ.

ಮ್ಯಾನೇಜರನಿಗೆ ನಗು ಬಂದಿತು. ಜೊತೆಗೆ ಅವನ ಈ ಅಜ್ಞಾನ ಕ್ಕಾಗಿ ದುಃಖವೂ ಎನಿಸಿತು. ಮೃದುವಾಗಿ ಅವನ ಮೈ ತಟ್ಟುತ್ತ ಹೇಳಿದ–

'ಇಲ್ಲ. ನೀನು ಹಾಗೆ ಮಾಡಲಾರೆ. ಗಡಿ ಎಂದರೆ ಮತ್ತೊಂದು ರಾಜ್ಯದ ನೆಲ. ಅಲ್ಲಿಯ ಜನರು ನಿನ್ನನ್ನು ತಮ್ಮ ಸೀಮೆಯೊಳಗಿಂದ ಹಾಯ್ದು ಹೋಗ ಗೊಡವುದಿಲ್ಲ.'

'ಏಕೆ ಹೋಗ ಗೊಡುವುದಿಲ್ಲ. ನಾನವರಿಗೇನಾದರೂ ತೊಂದರೆ ಕೊಡುತ್ತೇನೆಯೆ? ನೋಡಿ. ನನ್ನ ರೈಫಲ್ ಕೂಡ ದೂರ ಒಗೆದಿದ್ದೇನೆ. ಕೊನೆಗೂ ಅವರು ನನ್ನನ್ನು ಬಿಡದಿದ್ದರೆ ನಾನು ನೂರು ರೀತಿಯಲ್ಲಿ ಬೇಡಿ ಕೊಳ್ಳುತ್ತೇನೆ. ದೇವರಿಗಾಗಿ ನನ್ನನ್ನು ಬಿಡಿ ಎನ್ನುತ್ತೇನೆ. ಇಷ್ಟಾದರೂ ಅವರು ನನ್ನನ್ನು ನನ್ನ ಹೆಂಡತಿಯ ಬಳಿಗೆ ಹೋಗಲು ಬಿಡುವದಿಲ್ಲವೆ?'

ಮ್ಯಾನೇಜರನ ಮುಖ ಮತ್ತಷ್ಟು ಉದಾಸೀನವಾಯಿತು. ಅವನ ಎದೆ ದುಃಖದಿಂದ ತುಂಬಿ ಬಂದಿತು.

'ಇಲ್ಲ ಆದರೂ ಹೋಗಗೊಡುವದಿಲ್ಲ. ದೇವರ ಹೆಸರು! ಹುಂ' ಈಗ ದೇವರಿಗಾಗಿ ಭಕ್ತಿ ಯಾರಲ್ಲಿದೆ? ಅಂಜಿಕೆ ಯಾರಲ್ಲಿದೆ?

'ಆದರೆ ನಾನು ಇಲ್ಲಿದ್ದೇನು ಮಾಡಲಿ. ನೀವೇ ಹೇಳಿ. ನಾನು ಆಡಿದ್ದು ಇಲ್ಲಿಯವರಿಗೆ ತಿಳಿಯುವದಿಲ್ಲ. ಅವರು ಆಡಿದ್ದು ನನಗೆ ತಿಳಿಯು ವುದಿಲ್ಲ. ಹೀಗಿದ್ದಾಗ ನಾನು ಇಲ್ಲಿ ನಿಲ್ಲುವದಾದರೂ ಹೇಗೆ? ನನ್ನಿಂದ ಇಲ್ಲಿ ನಿಲ್ಲುವದಾಗುವುದಿಲ್ಲ.'

'ಅಂಜ ಬೇಡ. ಸಾವಕಾಶವಾಗಿ ಎಲ್ಲವೂ ತಿಳಿಯುವುದು.'

'ಇಲ್ಲ' ಅವನು ಮತ್ತೆ ತನ್ನ ತಲೆಯಲ್ಲಾಡಿಸಿದ. 'ನನ್ನಿಂದ ಕಲಿ ಯುವದಾಗುವದಿಲ್ಲ. ನಾನು ನೆಲ ಉಳುತ್ತೇನೆ. ಅಷ್ಟೆ. ಇದಕ್ಕಿಂತ ಹೆಚ್ಚಿಗೆ ನನಗೆ ಏನೂ ಬರುವದಿಲ್ಲ. ನಾನು ಊರಿಗೆ ಹೋಗಬೇಕೆನ್ನು ತ್ತೇನೆ. ನನಗೆ ಹಾದಿ ತೋರಿಸಿರಿ.'

'ಇದೇನು ಹುಚ್ಚುತನ. ನೀನು ಹೋಗಲಾರೆ. ನಿನಗೆ ಯಾವ ಹಾದಿ ತೋರಸಲಿ ನಾನು.'

‘ನೋಡಿ ಅವರು ನನ್ನನ್ನು ತಡೆಯುವದಿಲ್ಲ. ನನ್ನ ಹೆಂಡತಿ ಮಕ್ಕಳು ಅಲ್ಲಿ ಒಂಟಿಗರಾಗಿದ್ದಾರೆ. ಇದೇನು ಅವರಿಗೆ ಗೊತ್ತಿಲ್ಲವೆ ? ’

‘ಗೊತ್ತಿರಲಿ ಇಲ್ಲದಿರಲಿ ಅವರು ನಿನ್ನನ್ನು ಬಿಡುವದಿಲ್ಲ ಬೋರಿಸ್! ಇಲ್ಲದ ವಿಚಾರ ಮಾಡಬೇಡ. ನನ್ನ ಮಾತು ಕೇಳು. ನೀನು ಇನ್ನೂ ಕೆಲವು ದಿನ ಇಲ್ಲೇ ಇರು. ತಿಳಿಯಿತೆ? ’

‘ಎಷ್ಟೊಂದು ದಿನ. ಬಹಳ ದಿನ ಬೇಕಾಗುತ್ತದೇನು ?”

‘ನಾನು ಹೇಗೆ ಹೇಳಲಿ. ನನಗೂ ಗೊತ್ತಿಲ್ಲ. ಆದರೆ ಬೇಗನೆ ಮುಗಿದೀತು ಎಂಬ ಆಶೆ ಮಾತ್ರ ನನಗೂ ಇದೆ. ’

ಆ ವ್ಯಕ್ತಿಯ ಮುಖದ ಮೇಲೆ ಎಷ್ಟೊಂದು ನಿರಾಶೆ ಕವಿದಿತ್ತು, ಎಷ್ಟೊಂದು ದೈನ್ಯತೆ ಮೂಡಿ ನಿಂತಿತ್ತು, ಎಷ್ಟೊಂದು ಕೊರಗು ಹೆಪ್ಪುಗಟ್ಟಿತ್ತು ಎನ್ನುವದು ಆ ಕತ್ತಲಲ್ಲಿ ಮ್ಯಾನೇಜರನಿಗೆ ತಿಳಿಯಲಿಲ್ಲ.

‘ನಾನು ಇದು ವರೆಗೆ ತಡೆದೆ. ಮತ್ತೂ ತಡೆ ಎಂದರೆ ಎಲ್ಲಿಯ ವರೆಗೆ ತಡೆಯಲಿ ? ದಯವಿಟ್ಟು ನೀವು ಹಾದಿ ತೋರಿಸಿರಿ. ನಾನೆಲ್ಲಾ ಪ್ರಯತ್ನಿಸುತ್ತೇನೆ. ’

‘ಹಾದಿಯೇ ಇಲ್ಲ ಬೋರಿಸ್. ಅಂದ ಮೇಲೆ ನಾನು ಇಲ್ಲದ ಹಾದಿಯನ್ನೇನು ತೋರಿಸಲಿ. ಗಡಿಯ ಮೇಲೆಯೇ ಅವರು ನಿನ್ನನ್ನು ಸೆರೆ ಹಿಡಿಯುತ್ತಾರೆ........ನಿನಗಾಗಿ ಏನಾದರೂ ಕೆಲಸ ಕೊಡಿಸುತ್ತೇನೆ ಆಯಿತೆ ?’

ಇಲ್ಲಿ ನನಗೇನೂ ತಿಳಿಯುವದಿಲ್ಲ ’ ಜೋಲು ಮುಖದಿಂದ ಅವನು ಮೆಲ್ಲನೆ ಗುಣಗಿದ. ‘ನನ್ನಿಂದ ಇಲ್ಲಿ ಇರುವದಾಗುವದಿಲ್ಲ. ನೀವು ಸಹಾಯ ಮಾಡಿರಿ ಸಾಕು.’

‘ಇಲ್ಲ ಬೋರಿಸ್ ನಾನು ಮಾಡಲಾರೆ.’

‘ದಯವಿಟ್ಟು ಅದೊಂದು ಮಾತು ಅನ್ನ ಬೇಡಿ ಇದೊಂದು ಮಾತು ನಡೆಸಿಕೊಡ—ನಾನು ಸಾಯುವವರೆಗೆ ನಿಮ್ಮನ್ನು ಮರೆಯುವದಿಲ್ಲ. ನೀವೇ ಇಲ್ಲವೆಂದ ಮೇಲೆ ಇಲ್ಲಿ ನಾನು ಯಾರ ಒಳಿ ಹೋಗಲಿ ? ಯಾವ ಆಶೆ ಹಿಡಿಯಲಿ ?

ಇಬ್ಬರೂ ಒಬ್ಬರನ್ನೊಬ್ಬರು ನೋಡುತ್ತ ನಿಂತರು. ಆ ಹಳ್ಳಿಯ ಹುಂಬನಿಗೆ ಹೇಗೆ ತಿಳಿಸಬೇಕೊ ಎಂದು ಮ್ಯಾನೇಜರ್ ಯೋಚಿಸುತ್ತಿದ್ದ. ಅತ್ತ ಅವನ ಕೈಯಲ್ಲಿಯ ಟೊಪ್ಪಿಗೆ ಮುದ್ದೆ ಯಾಗತೊಡಗಿತ್ತು.

'ಅವರು ನನ್ನನ್ನೇಕೆ ಮನೆಯಿಂದ ಕರೆತಂದಿದ್ದಾರೆ. ಆಗ ಎಷ್ಟು ಸವಿಯಾದ ಮಾತನಾಡಿದ್ದರು. ನಾನು ರಶಿಯಕ್ಕಾಗಿ ಅಲ್ಲಿಯ ರಾಜನಿಗಾಗಿ ಯುದ್ಧ ಮಾಡಬೇಕೆಂದಿದ್ದರು. ಈಗೆಲ್ಲಿಯ ರಶಿಯ—ಎಲ್ಲಿಯ ರಾಜ........ಅವನಿಗೇನಾಯಿತೆಂದಿರಿ ?'

"ಅವನನ್ನು ತೆಗೆದೊಗೆದಿದ್ದಾರೆ."

"ತೆಗೆದೊಗೆದಿದ್ದಾರೆಯೆ ?" ತನ್ನ ಆಶೆಗಳೆಲ್ಲವನ್ನು ಹಿಂಡಿ ಹಿಪ್ಪೆ ಮಾಡುವದಂತೆ ಅವನು ಆ ವಾಕ್ಯವನ್ನು ಉಚ್ಚರಿಸಿದ. ' ಹಾಗಾದರೆ ನಾನು ಇಗೇನು ಮಾಡಲಿ ನೀವೇ ಹೇಳಿ. ಹೇಗಾದರೂ ಸರಿ. ನಾನು ಮನೆಗೆ ಹೋಗಲೇಬೇಕು. ನನ್ನ ಹೆಂಡತಿ ನನ್ನ ಹಾದಿ ಕಾಯುತ್ತಿರಬೇಕು. ನನ್ನ ಮಕ್ಕಳು ನನಗಾಗಿ ಅಳುತ್ತಿರಬೇಕು. ಅವರು ಹೇಗೆ ಜೀವಿಸುತ್ತಿದ್ದಾರೋ ಏನೋ. ಮಕ್ಕಳು ರೊಟ್ಟಿಗಾಗಿ ತಾಯಿಯನ್ನು ಕಾಡಿ ಪೀಡಿಸುತ್ತಿರಬೇಕು. ನನ್ನ ಮೇಲೆ ಬೇಡ. ಕಡೆಗೆ ಆ ಹೆಂಡತಿ ಮಕ್ಕಳ ಮೇಲಾದರೂ ಕನಿಕರ ಪಟ್ಟು ಸಹಾಯ ಮಾಡಿರಿ. ಅಂದರೆ ನಾನು ಹೇಗಾದರೂ ಹೋಗ ಬಲ್ಲೆ.

'ನಿನಗೆ ಮತ್ತೆ ಹೇಗೆ ತಿಳಿಸಲಿ. ಇದುವರೆಗೂ ಹೇಳಿದ್ದು ತಿಳಿಯದೆ? ಇದು ನನ್ನಿಂದ ಆಗದ ಕೆಲಸ. ಆಗುವಂತಿದ್ದರೆ ಮಾಡದಿರುತ್ತಿದ್ದೇನೆ. ನನಗೇನು ಕನಿಕರವಿಲ್ಲೆಂದು ಕೊಂಡೆಯಾ ?"

'ಯಾರೂ ಮಾಡಲಾರರೆ ?'

'ಯಾರೂ ಮಾಡಲಾರರು.'

ನಿರಾಶೆಯಿಂದ ಅವನು ತನ್ನ ತಲೆ ಕೊಡಹಿದ.

'ಒಳ್ಳೇದು ಸ್ವಾಮಿ. ನಮಸ್ಕಾರ' ಎಂದು ಮೆಲ್ಲನೆ ಭಾರವಾದ ಹೆಜ್ಜೆ ಹಾಕುತ್ತ ಅವನು ಗುಡ್ಡ ಇಳಿದ. ಕನಿಕರದ ಒಂದು ನಿಟ್ಟುಸಿರು ಬಿಟ್ಟು ಮ್ಯಾನೇಜರ ಮತ್ತೆ ತನ್ನ ಕೆಲಸಕ್ಕೆ ತೆರಳಿದ

ಮರುದಿನ ಮೀನು ಹಿಡಿಯಲು ಹೋದ ಮೀನುಗಾರನಿಗೆ ಬೆತ್ತಲೆಯಾದ ಹೆಣವೊಂದು ಕಣ್ಣಿಗೆ ಬಿತ್ತು. ಮತ್ತೊಬ್ಬರಿಂದ ತನಗೆ ದೊರೆತ ಅಂಗಿಯನ್ನೂ ಟೊಪ್ಪಿಗೆಯನ್ನೂ ಕಾಳಜಿಯಿಂದ ಮಡಚಿ ದಡದ ಮೇಲಿಟ್ಟು ಅವನು ಬಂದಂತೆಯೇ ಹೊರಟು ಹೋಗಿದ್ದ ಯಾವ ಗಡಿಗಳೂ ಅಡ್ಡ ಬಾರದ ದಾರಿಯಲ್ಲಿ; ಯಾವ ಅಧಿಕಾರಿಗಳೂ ತಡೆಹಿಡಿಯದ ಎಡೆಯಲ್ಲಿ!

—( "The Runway" ಎಂಬುದರ ಅನುವಾದ )

# ಹಿನ್ನುಡಿ



## ಜೀವನ—ಪರಿಚಯ

**ರೊಮೆನ್ ರೋಲಾ, ಗಾರ್ಕಿ, ಟಾಲ್‌ಸ್ಟಾಯ್, ಬೆರ್ನಾರ್ಡ್‌ಶಾ, ಪೆರ್ಲ್‌ಬಕ್, ಇಬ್‌ಸೆನ್, ಗಯಟೆ** ಮೊದಲಾದ ವಿಶ್ವ ವಿಖ್ಯಾತ ಸಾಹಿತಿಗಳ ಜೀವನ ಚರಿತ್ರದಲ್ಲಿ—' ಇವರ ಬಹುಪಟ್ಟಿನ ಬರೆಹಗಳು ಪ್ರಪಂಚದ ಸಾಹಿತ್ಯಗಳಲ್ಲೆಲ್ಲಾ ತರ್ಜುಮೆಯಾಗಿವೆ'— ಎಂಬ ಮಾತು ತಪ್ಪದೆ ಬರುತ್ತದೆ. ಈ ಮಾತನ್ನು ಮನದಂದಾಗಲೆಲ್ಲ ಪ್ರಪಂಚದ ಸಾಹಿತ್ಯಗಳೆಲ್ಲೆಲ್ಲಾ ಬಂದ ಅಂಥ ವಿಶ್ವಸಾಹಿತಿಗಳ ಸಾಹಿತ್ಯದ ಮುಂಗುರುತು ಕೂಡಾ ಕನ್ನಡದಲ್ಲಿ ಇನ್ನೂ ಬಂದಿಲ್ಲವಲ್ಲಾ ಎಂಬ ಕೊರಗು ನಮ್ಮನ್ನು ಕೊರೆಯದಿರದು. ಪ್ರಪಂಚದ ಸಾಹಿತ್ಯಗಳಲ್ಲೆಲ್ಲ ಇಳಿದು ಹೋದ ವಿಶ್ವಸಾಹಿತಿ **ರವೀಂದ್ರರ** ಸಾಹಿತ್ಯವೇ ಕನ್ನಡದಲ್ಲಿ ಇನ್ನೂ ಸಾಕಷ್ಟು ಇಳಿದು ಬಂದಿಲ್ಲ; ಅವರ ಅಮೋಘವಾದ ಕವನ, ಕಥನ ಕಾದಂಬರೀ-ಕಲೆಯ ಕೌಶಲ್ಯ ಕನ್ನಡಿಗರಿಗಿನ್ನೂ ಆಗತಕ್ಕರೀತಿಯಲ್ಲಿ ತಿಳಿದು ಬಂದಿಲ್ಲ ಎಂಬದನ್ನು ಬಗೆದರೆ, ಮನೆಯನ್ನೇ ಗೆಲ್ಲದ ನಾವು ಮಾರನ್ನು ಗೆಲ್ಲಬಲ್ಲೆವೇ ಎಂಬ ಮಾತು ಮೂಡಿ ಬರುತ್ತದೆ. ಪ್ರಪಂಚದ ಸಾಹಿತ್ಯಗಳಲ್ಲೆಲ್ಲ ಬಹಳ ಪ್ರಾಚೀನವೂ ವಿಶಾಲವೂ ಆದ ಸಾಹಿತ್ಯ ಕನ್ನಡದ್ದು ಎಂದು ಹೆಮ್ಮೆ ಪಡುವ ಕನ್ನಡಿಗರು ಆಧುನಿಕ ವಿಶ್ವಸಾಹಿತ್ಯಕ್ಕೆ ಎರವಾಗಿರುವುದು ನಿಜವಾಗಿಯೂ ತೀರ ಕಸಿಕರದ ಮಾತು.

ಮೇಲ್ಕಾಣಿಸಿದ ವಿಶ್ವಸಾಹಿತಿಗಳಿಗೆಲ್ಲಾ ಸರಿಸಮಾನರಾಗಿ —

ಒಂದೆರಡು ಮಾತಿನಲ್ಲಿ ಅವರಿಗಿಂತ ಮಿಗಿಲಾಗಿ ನಿಲ್ಲಬಲ್ಲ ವ್ಯಕ್ತಿ–' **ಸ್ಟಿಫಾನ್ ಜ್ವಿಗ್.**' ಇವರು **ಆಷ್ಟ್ರಿಯಾ** ದೇಶದವರು. ಆ ದೇಶದ ಸಾಹಿತ್ಯ ಸೃಷ್ಟಿಗೆ ಕಳಸ ಕಟ್ಟಿದವರು. ಅಲ್ಲದೆ ಪ್ರಪಂಚದ ವಿವಿಧ ದೇಶಗಳಲೆಲ್ಲ ಸುತ್ತಾಡಿ ವಾಸಿಸಿ, ಅನೇಕ ಜನಾಂಗಗಳ ಜೀವನವನ್ನು ಕಣ್ಗಂಡು, ಮೆಚ್ಚಿ ವಿಶ್ವ ಶಾಂತಿಯ ತಳಹದಿಯ ಕೈಗಂಬಗಳನ್ನು ನೆಡಿಸಿದ ಪುಣ್ಯ 'ಜ್ವಿಗ್' ರದು. ಆ ಕೈಗಂಬಗಳೇ ಅವರ ಸಾಹಿತ್ಯ ಸೃಷ್ಟಿ. ವಿಶ್ವ ಜೀವನದ ಸಾಮರಸ್ಯವೇ ಆ ಸೃಷ್ಟಿಯ ಗುರಿ. ಆ ದೃಷ್ಟಿಯಿಂದ 'ಜ್ವಿಗ್'ರ ಸಾಹಿತ್ಯನಿರ್ಮಾಣ ಮತ್ತೊಂದು 'ವಿಶ್ವಭಾರತಿ' ಯೇ ಎನ್ನಬಹುದು. ರವೀಂದ್ರರು ಭಾರತ ದಲ್ಲಿ ಮಾಡಿದ ಸಾಹಿತ್ಯಕ ಕಾರ್ಯವನ್ನೇ 'ಜ್ವಿಗ್' ಆಷ್ಟ್ರಿಯದಲ್ಲಿ ಮಾಡಲು ತಮ್ಮ ಜೀವನವನ್ನು ಧಾರೆಯೆರೆದರು. ಆದರೆ ಆಷ್ಟ್ರಿಯದ ಸಂಕುಚಿತ ಕ್ಷೇತ್ರವನ್ನು ಮೀರಿ ಹರಿಯುವು ಅವರ ದೃಷ್ಟಿ; ಅವರ ಸೃಷ್ಟಿ. ಇಂಗ್ಲೆಂಡ್, ಫ್ರಾನ್ಸ್, ಅಮೇರಿಕೆ, ಬ್ರಾಝಿಲ್‌ಗಳೂ ಅವರ 'ಸ್ವ' ದೇಶಗಳಾದುವು. ಆಯಾ ದೇಶಗಳ ಜೀವನದಲ್ಲಿ ಬೆರೆದು, ಸ್ಫೂರ್ತಿಗೊಂಡು, ತಮ್ಮ ಆತ್ಮಿಕ ಜೀವನವನ್ನು ನಿಜವಾಗಿಯೂ ವಿಶ್ವವ್ಯಾಪಿಯಾಗಿಸಿ, ತಮ್ಮ ಸಾಹಿತ್ಯ ದಿಟಕ್ಕೂ ದೇಶಾತೀತ ಅಂತರ್ದೇಶೀಯವಾಗುವಂತೆ ಮಾಡಿದ ಅಪರೂಪದ ವ್ಯಕ್ತಿ 'ಜ್ವಿಗ್' ರು.

'ಜ್ವಿಗ್'ರ ಜನ್ಮ ಆಷ್ಟ್ರಿಯದ ರಾಜಧಾನಿ ವಿಯೆನ್ನದಲ್ಲಿ 28–11–1881 ರಲ್ಲಾಯಿತು. ಇವರು ರವೀಂದ್ರರಿಗಿಂತ 20ವರ್ಷ ಚಿಕ್ಕವರು. ವಿಯೆನ್ನ ಆ ಕಾಲದಲ್ಲಿ ಯುರೋಪದ ಸಾಂಸ್ಕೃತಿಕ ಸಾಹಿತ್ಯಕ ಹಾಗು ಕಾಲಾತ್ಮಕ ಕೇಂದ್ರವಾಗಿತ್ತು. ರವೀಂದ್ರರಂತೆ 'ಜ್ವಿಗ್'ರೂ ಒಂದು ಸಿರಿವಂತ (ಜ್ಯೂ) ಮನೆತನದಲ್ಲಿ ಹುಟ್ಟಿದವರಾದುದರಿಂದ ಅವರಿಗೆ ಬಾಲ್ಯದಲ್ಲೇ ಒಳ್ಳೆಯ ವಾತಾವರಣ ಹಾಗು ಶಿಕ್ಷಣವೆರಡೂ ದೊರೆಯಲನುವಾಯಿತು. ವಿಶ್ವವಿದ್ಯಾಲಯದಲ್ಲೂ ಅವರ ಶಿಕ್ಷಣ ಯಶಸ್ವಿಯಾಯಿತು. ಇತಿಹಾಸ, ಸಾಹಿತ್ಯ ಹಾಗು ತತ್ತ್ವಜ್ಞಾನಗಳಲ್ಲಿ ಅವರು ವಿಶೇಷ ಪರಿಶ್ರಮ ಪಟ್ಟುದರಿಂದಲೂ, ಫ್ರಾಯ್ಡ್ (Frued) ರಂತಹ ಜಾಗತಿಕ ಮನಶ್ಶಾಸ್ತ್ರಜ್ಞರ ಸನ್ನಿಧಾನದಿಂದಲೂ ತರುಣ 'ಜ್ವಿಗ' ರಿಗೆ ಆರಂಭದಲ್ಲೇ ಜಾಗತಿಕ ದೃಷ್ಟಿ

ಯುಂಟಾಯಿತು. ವಿಯೆನ್ನ ಹಾಗು ಆಸ್ಟ್ರಿಯಗಳನ್ನು ಮನಮುಟ್ಟಿ ಪ್ರೀತಿ ಸುತ್ತಿದ್ದ ಅವರಿಗೆ ಸ್ವಾಭಾವಿಕವಾಗಿಯೇ ಇಡೀ ಮಾನವ್ಯದ ಬಗೆಗೆ ಜಗತ್ತಿನ ವಿವಿಧ ದೇಶಗಳ ಬಗೆಗೆ ಆದರ ಹಾಗು ಕುತೂಹಲಗಳು ಚಿಗುರೊಡೆದುವು. ರವೀಂದ್ರರಂತೆ 'ಜ್ವೆಗ್' ರೂ ಪ್ರಪಂಚದ ಹಲವಾರು ದೇಶಗಳನ್ನು ಸುತ್ತಾಡಿದರು. ಆದರ್ಶ ಜನಾಂಗ, ಆದರ್ಶ ದೇಶ ಅವರಿಗೆ ಬೇಕಾಗಿತ್ತು. ಆ ಪರ್ಯಟನಗಳಲ್ಲಿ ೧೯೧೦ರ ಹೊರವೊಳಗೆ ಅವರೊಮ್ಮೆ ಭಾರತಕ್ಕೂ ಬಂದಿದ್ದರು. ತಮ್ಮ ಆ ಪ್ರವಾಸ ಅತ್ಯಂತ ಆಕರ್ಷಕವಾಗಿದ್ದಿತೆಂದು ಅವರೇ ಉಲ್ಲೇಖಿಸಿದ್ದಾರೆ. ಪರ್ಯಟನಗಳೊಡನೆ ಸಾಹಿತ್ಯ ಸೃಷ್ಟಿಯೂ ಅವಿರತವಾಗಿತ್ತು.

ಆರಂಭದಲ್ಲಿ ಅವರು ಹೆಚ್ಚಾಗಿ ಮಾಡಿದುದು ವಿವಿಧ ದೇಶಗಳ ವಿವಿಧ ಭಾಷೆಗಳ ಶ್ರೇಷ್ಠ ಸಾಹಿತ್ಯದ ಅನುವಾದಕಾರ್ಯ ಸಾಹಿತ್ಯಕ ಆತ್ಮವಿಶ್ವಾಸ ಅವರಿಗೆ ಆಗಲೇ ಸಾಕಷ್ಟು ಬಂದಿರಲಿಲ್ಲ. ಆದರೆ ಅವರ ಆಗಿನ ಕವನಗಳೆಲ್ಲಾ ಸ್ವತಂತ್ರವೇ ಆಗಿದ್ದುವು. ತಮ್ಮ ೧೯ನೇ ವಯಸ್ಸಿನಲ್ಲೇ ತಮ್ಮ ಕವನಗಳ ಪ್ರಥಮ ಸಂಗ್ರಹವೊಂದನ್ನು ಅವರು ಪ್ರಕಟಿಸಿದ್ದರು. ಆದರೂ ಬಲುದಿನಗಳವರೆಗೆ—ಎಂದರೆ ಸುಮಾರು 40 ವಯಸ್ಸಿನವರೆಗೆ ತಾವಿನ್ನೂ ಸಾಹಿತ್ಯ ಸೃಷ್ಟಿಗೆ ಅಪಕ್ವವಾಗಿದ್ದೇವೆಂದೇ ಅವರು ಭಾವಿಸಿದ್ದರು.

1914—18ರ ಜಾಗತಿಕ ಮಹಾಯುದ್ಧ ಅವರ ಜೀವನದ ಸಂಧಿಕಾಲವಾಗಿ ಪರಿಣಮಿಸಿತು. ಯುದ್ಧದ ಪ್ರಥಮ ವರ್ಷದಲ್ಲಿ ಅದರಲ್ಲಿ ಭಾಗವಹಿಸಿದ ಅವರಿಗೆ ಆ ಅನವಶ್ಯವಾದ ಹತ್ಯಾಕಾಂಡ ಹೇಸಿಗೆಯನ್ನುಂಟು ಮಾಡಿತು. ಆ ಮಹಾಯುದ್ಧ ಪ್ರಪಂಚದ ಅನೇಕ ವಿಚಾರವಂತರಿಗೂ ಸುಜ್ಞರಿಗೂ ಅಪೂರ್ವವಾದ ಹೇಯ ಭಾವನೆಯನ್ನುಂಟು ಮಾಡಿದುದು ಆಗಿನ ಯುರೋಪದ ಸಾಹಿತ್ಯದಲ್ಲೆಲ್ಲಾ ಮೂಡಿಕೊಂಡಿದೆ. ಆ ಅತೀವ ತೀವ್ರವಾದ ಹೇಯ ಭಾವನೆಯೇ ಶಾಂತಿಪಾಠದ ಬಾವುಟವಾಯಿತೆಂಬಂತೆ "**ಜೆರೆಮಿಯಾ**" ಎಂಬ ರೂಪಕ-ನಾಟಕವಾಗಿ ಹೊರಬಂತು, 1917ರಲ್ಲಿ. ಇದೇ ಅವರ ಪ್ರ-ಪ್ರಥಮವಾದ ಹಾಗು ಪ್ರಭಾವಶಾಲಿಯಾದ ಸ್ವತಂತ್ರ ಕೃತಿ. ಅದು ಯುದ್ಧಗಳ ನಿಷ್ಪ್ರಯೋಜಕತೆಯನ್ನು ಅಮಾನುಷೀ

ಯತೆಯನ್ನು ಒತ್ತಿ ಹೇಳುವ ಶ್ರೇಷ್ಠ ಸಾಹಿತ್ಯ. ಪ್ರಕಟವಾದ ವರ್ಷವೇ ಅದು ಸ್ವಿತ್‌ಜರ್‌ಲಂಡಿನ ಝುರಿಕ್ ನಗರದಲ್ಲಿ ಪ್ರಯೋಗಿಸಲ್ಪಟ್ಟಿತು. ಮುಂದೆ 1939ರಲ್ಲಿ ನ್ಯೂಯಾರ್ಕಿನಲ್ಲೂ ಪ್ರಯೋಗಿಸಲ್ಪಟ್ಟಿತು.

ಆ ಮಹಾಯುದ್ಧದ ಕೈವಾರಿಗಳಿಗೆ ಶಾಂತಿವಾದಿಗಳೆಲ್ಲಾ ಆಗ ಕಂಟಕ ಪ್ರಾಯರಾಗಿದ್ದರು. ಅಂತಹ ಹಿರಿಸಾಹಿತಿಗಳ ಗುಂಪಿಗೆ ಗುಂಪೇ ಯುದ್ಧಾವೃತವಾದ ತಂತಮ್ಮ ದೇಶಗಳನ್ನು ತೊರೆದು ತಟಸ್ಥವಾಗಿದ್ದ ಸ್ವಿತ್‌ಜರ್‌ಲಂಡನ್ನು ಸೇರಿತ್ತು. ಅಂತೇ ಝುರಿಕ್‌ನಲ್ಲಿರುವಾಗ ಜ್ವಿಗ್‌ರಿಗೆ ಯುರೋಪದ ಮಹಾಜ್ಞಾನಿಗಳಾದ ರೋಮೇನ್ ರೋಲಾ, ಟೊಸ್ಕಾನಿನಿ, ಬ್ರುನೋವಾಲ್ಟರ್, ಫ್ರೂಡ್ ಮೊದಲಾದವರ ನಿಕಟ ಸಂಬಂಧವೂ ಬಂತು. ಆ ಮಹಾವ್ಯಕ್ತಿಗಳ ಸಂಬಂಧದಿಂದಲೇ 'ಜ್ವಿಗ್'ರಿಗೆ ವ್ಯಕ್ತಿತ್ವದ ಮಹತಿ ತಿಳಿದುದದರಿಂದ ಅವರು ಅಂದಿನಿಂದ ವ್ಯಕ್ತಿಚರಿತ್ರ (Biography)ಗಳನ್ನು ಬರೆಯಲು ಮೊದಲು ಮಾಡಿ, ರೊಮೆನ್‌ರೋಲಾ, ಫ್ರೂಡ್, ಡಿಕೆನ್ಸ್ ನಿಯೆಟ್ಷೇ, ಟಾಲ್‌ಸ್ಟಾಯ್ ಮೊದಲಾದ ಜಗದ್ವಿಖ್ಯಾತರ ಚರಿತ್ರಗಳನ್ನೆಲ್ಲಾ ಆಸ್ಟ್ರಿಯದ ಸಾಹಿತ್ಯಕ್ಕೆ ನೀಡಿದರು. ಮಹಾಯುದ್ಧ ಮುಗಿದನಂತರ 1918—34ರ ವರೆಗೆ ಆಸ್ಟ್ರಿಯಕ್ಕೆ ಮರಳಿ ಬಂದು ಸಾಲ್‌ಜ್‌ಬರ್ಗಿನಲ್ಲಿ ನೆಲೆನಿಂತರು. ಆ ಸಮಯಕ್ಕೆ-(ಅವರ ಮರಣದನಂತರ ಜ್ವಿಗ್‌ರ ಸುಂದರವಾದ ಜೀವನ ಚಿತ್ರವನ್ನು ಬರೆದ)—ಫ್ರೆಡ್ರಿಕೆ ಎಂಬವಳನ್ನು ಪ್ರಥಮ ಪತ್ನಿಯಾಗಿ ಸ್ವೀಕರಿಸಿದ್ದು.

1934 ಹೊತ್ತಿಗೆ ಹಿಟ್ಲರನ ನೆರಳು ಯುರೋಪದಲ್ಲೆಲ್ಲ ಕತ್ತಲೆಯ ಛಾಯೆಯನ್ನು ಹರಡುವುದರಲ್ಲಿತ್ತು. ಆಗ ತಾನು ಬರೆಯುತ್ತಿದ್ದ 'ಮೇರಿ, ಕ್ವೀನ್ ಆಫ್ ಸ್ಕಾಟ್' ಎಂಬ ಗ್ರಂಥದ ಪೂರ್ತಿಗಾಗಿ ಜ್ವಿಗ್‌ರು ಇಂಗ್ಲೆಂಡಿಗೆ ಹೋಗಿ ನಾಲ್ಕು ವರ್ಷ ನಿಂತರು. ಆಸ್ಟ್ರಿಯದಲ್ಲಿ ಜೀವನ-ಸ್ವಾತಂತ್ರ್ಯಕ್ಕೆ ಕ್ರಮೇಣ ಉಂಟಾಗುತ್ತಿದ್ದ ಬಂಧನಗಳನ್ನು ಬಗೆದು ಜ್ವಿಗ್‌ರು ಇಂಗ್ಲೆಂಡಿನಲ್ಲೇ ಉಳಿದು ಅಲ್ಲಿಯ ನಾಗರಿಕತ್ವವನ್ನು ಪಡೆದರು. ಆಸ್ಟ್ರಿಯವು ನಾಝೀ ತತ್ತ್ವಕ್ಕೆ ಬಲಿಯಾಗುತ್ತಿದ್ದುದೂ, ಜ್ಯೂ ಜನರ ವಿಪ್ಲವವೂ ಅವರಿಗೆ ಅಸಹನೀಯವಾಯಿತು. ಇಂಗ್ಲೆಂಡಿನಲ್ಲಿರುವಾಗ, (ಪ್ರಥಮ ಪತ್ನಿ

ಯಿಂದ ಆ ಮೊದಲೇ ಬಿಡುಗಡೆಯಾದುದರಿಂದ, ) ತಮ್ಮ ಸೆಕ್ರೆಟರಿಯಾಗಿದ್ದ ಬ್ರಿಟಿಶ್ ತರುಣಿ ಎಲಿಜಾಬೆಥ್‌ಳನ್ನೆ ಮದುವೆಯಾದರು. ಆದರೆ ಮುಂದೆ ಕೆಲದಿನಗಳಲ್ಲೇ, ಇಂಗ್ಲೆಂಡಿನ ತೋರಿಕೆಯ ಸ್ವತಂತ್ರ ಜೀವನದಿಂದಲೂ ಹಾಗು ಇಂಗ್ಲೀಷ್ ಜನತೆಯ ವಿಕ್ಷಿಪ್ತ ವೃತ್ತಿಯಿಂದಲೂ ಅವರು ಬೇಸರಗೊಂಡು, ಅಮೇರಿಕೆಗೆ ಹೋಗಿ ನ್ಯೂಯಾರ್ಕಿನಲ್ಲಿ ನೆಲೆಸಿದರು. ಇಡೀ ದೇಶವನ್ನೆಲ್ಲಾ ಸುತ್ತಾಡಿದರು. ಬಾಹ್ಯದಲ್ಲಿ ಒಂದು ಹೊಸ ಜೀವನ ಪ್ರಾರಂಭವಾದಂತಿದ್ದರೂ, ಅವರ ಅಂತರಂಗದಲ್ಲಿ ಶಾಂತಿಯಿರಲಿಲ್ಲ.

ತಮ್ಮ ಆದರ್ಶಕ್ಕೊಪ್ಪಬಹುದಾದ ನಾಡನ್ನು ಹುಡುಕುತ್ತ ಅವರು ಕೊನೆಗೆ ಬ್ರಾಜಿಲ್‌ದಲ್ಲಿ 'ರಿಯೊ' ದ ಬಳಿ, ಪೆಟ್ರೊಪೋಲಿಸಿನಲ್ಲಿ ನೆಲೆಸಿದರು. ಬ್ರಾಜಿಲ್ ಅವರ ಮನ ಹಿಡಿಯಿತು; ಎದೆಯನ್ನು ಸೆಳೆಯಿತು. ಶಾಂತಿ, ಸಮೃದ್ಧಿ, ಸೌಂದರ್ಯಗಳೆಲ್ಲಾ ಅಲ್ಲಿದ್ದುವು ಮೇಲೆ ಪ್ರಜಾತಂತ್ರ. ಯುದ್ಧಗಳಿಂದ ಅತೀವ ದೂರವಾದ ನಾಡು. ಅಂತೇ ಜ್ವಿಗ್‌ರು ಅದನ್ನು ಮೆಚ್ಚಿದರು, ಹಾಡಿ ಹೊಗಳಿದರು. ಬ್ರಾಜಿಲ್‌ಕ್ಕೆ ಮುಡುಪಾಗಿ ಒಂದು ಗ್ರಂಥವನ್ನು ಬರೆದರು. ಬ್ರಾಜಿಲ್‌ದ ಜನತೆಯೂ ಅವರನ್ನು ಮೆಚ್ಚಿತು.

ಆದರೆ ಒಬ್ಬ ತಿಳುವಳಿಕೆಯುಳ್ಳ ಬಿಸಿನೆತ್ತರದ ತರುಣನೆದುರೇ ಆತನ ತಾಯಿಯ ಬಲಾತ್ಕಾರ ನಡೆದರೆ ಆ ತರುಣನ ಮನಸ್ಥಿತಿ ಎಂತಾಗುವುದೊ ಅಂತಾಗಿತ್ತು ಜ್ವಿಗ್ಗರ ಸ್ಥಿತಿ. ಅವರ ಮಾತೃ ಭೂಮಿ ಆಸ್ಟ್ರಿಯ, ಜರ್ಮನಿಯ ತೊತ್ತಾಗಿ ಹೇಳ ಹೆಸರಿಲ್ಲದಂತಾಗಿತ್ತು. ತನ್ನದೆಂಬ ಸ್ವದೇಶ ತನಗಿಲ್ಲದಂತಾದುದಕ್ಕಾಗಿ 'ಜ್ವಿಗ್ಗ್' ರು ಮರುಗಿದ್ದು ಅಷ್ಟಿಷ್ಟಲ್ಲ. ಬ್ರಾಜಿಲ್ ಎಷ್ಟೇ ಸುಂದರವಾಗಿದ್ದರೂ, ಅವರು ನಿಜವಾಗಿ ಸ್ವತಂತ್ರ ಆಸ್ಟ್ರಿಯವನ್ನೇ ಬಯಸುತ್ತಿದ್ದರು. ಆದರದು ಹಿಟ್ಲರನ ಊಳಿಗದ ದಾಸಿಯಾಗಿತ್ತು. ಈ ಪರಿಸ್ಥಿತಿ 60 ವರ್ಷದ ಮುಪ್ಪಿನಲ್ಲಿದ್ದ ಜ್ವಿಗ್ಗರಿಗೆ ಅಸಾಧ್ಯ, ಅಸಹ್ಯವಾಯಿತು. 1942ರ ಫೆಬ್ರುವರಿ 23ರಂದು ಅವರು ತಮ್ಮ ತರುಣಪತ್ನೀ ಸಮೇತರಾಗಿ ವಿಷಪ್ರಾಶನ ಮಾಡಿ ಪ್ರಾಣ ನೀಗಿದ್ದರು. ಆಸ್ಟ್ರಿಯ ನಾಮ ಶೇಷವಾದುದರಲ್ಲಿ ಅವರಿಗ ವಿಶ್ವವೇ ದಾಸ್ಯದ ದಾರಿಹಿಡಿದಿದೆ ಎಂದು ಮನದಟ್ಟಾಯಿತು. ಪತಿಪತ್ನಿಯರಿಬ್ಬರೂ ಪರಸ್ಪರ ಗಾಢಾಲಿಂಗನದಲ್ಲೇ

ಮರಣವನ್ನಪ್ಪಿದ್ದರು. ಬಳಿಯಲ್ಲಿ ಎರಡು ವಿಷದ ಕುಪ್ಪಿಗಳೂ ಒಂದು ಕಾಗದವೂ ಇತ್ತು ಅದರಲ್ಲಿ ಹೀಗೆ ಬರೆದಿತ್ತು*:—

" ನಾನು ಸ್ವೇಚ್ಛೆಯಿಂದ ಸಾಯುವ ಮುನ್ನ ನಾನು ಮೆಚ್ಚಿದ ನಾಡು ಬ್ರಾಜಿಲಕ್ಕೆ ಶಿರಬಾಗುತ್ತೇನೆ. ನಾನಿದನ್ನು ಪ್ರೀತಿಸಿದ್ದೇನೆ. ಅದೂ ನನ್ನನ್ನು ಆದರಿಸಿದೆ. ಇಲ್ಲಿ ನನ್ನ ಜೀವನ ನಿತ್ಯವೂ ನೂತನವಾಗಿ ಪುನರುಜ್ಜೀವಿತ ವಾಗಿದೆ. ಆದರೆ, ನನ್ನ ಮಾತೃಭೂಮಿಯು ಪತನವನ್ನು ಕಂಡ ನಂತರ ಜೀವನ ಅಶಕ್ಯ—ಅಸಹ್ಯವಾಗಿದೆ. ನನ್ನ ಅಧ್ಯಾತ್ಮಿಕ ಕ್ಷೇತ್ರ, ಯುರೋಪು, ಇಂದು ಕರಾಳ ನೃತ್ಯದ ಕಾಲ್ಕೆಳಗೆ ಸಿಕ್ಕಿದೆ. ಇದನ್ನೆಲ್ಲ ಕಣ್ಣಾರೆ ಕಂಡ ನಾನು, ಈ ಮುದಿ ವಯಸ್ಸಿನಲ್ಲಿ ಜೀವನವನ್ನು ಹುರಿಗೊಳಿಸಿ ಬಾಳಲಾರೆ. ಮಾತೃ ಭೂಮಿಯ ಹದನು ತಪ್ಪಿದ ನನಗೆ ಮರಣವೇ ಮೊರೆ. ಆದುದರಿಂದ ನನ್ನ ಹಾಗು ಜಾಗತಿಕ ಜೀವನ ಸ್ವಾತಂತ್ರ್ಯಕ್ಕೆ ಮುಡುಪಾಗಿಸಿದ ನನ್ನ ಹರಣಗಳನ್ನು ಇಂದು ನೀಗುತ್ತಿದ್ದೇನೆ. ನನ್ನ ಮಿತ್ರರಿಗೆಲ್ಲಾ ಅನಂತ ವಂದನೆಗಳು "

' ಜ್ವಿಗ್ ' ರ ಇಚ್ಛಾಮರಣಕ್ಕಾಗಿ ಬ್ರಾಜಿಲ್‌ದಂತೆ ಜಗತ್ತಿನ ಸ್ವತಂತ್ರ ಜನಾಂಗಗಳೆಲ್ಲಾ ಕಣ್ಣೀರಿಟ್ಟುವು. ಆಗ ಬ್ರಾಜಿಲ್ಲಿನ ರಾಷ್ಟ್ರಾಧ್ಯಕ್ಷರಾದ

---

*' Before I depart from life by my own free will, I want to do my last duty which is to thank this marvellous country—Brazil, which so hospitably received me. Each day I spent here I loved the country more and in no other could I have such hopes of reconstructing my life.

After I saw the country of my own language fall and my spiritual land, Europe, destroying itself, and as I reach the age sixty, it would require immense strength to reconstruct my life and my energy is exhausted by long years' peregrination as one withont a country. Therefore I believe it is time to end my life which was dedicated only to spiritual work considering human liberty and my own as the greatest wealth in the world. "

I have an affectionate good-bye to my friends.

ಜಿ. ವರ್ಗಾಸರು—ಮರಣಾನಂತರವೂ ಜ್ವಿಗ್ ದಂಪತಿಗಳನ್ನು ರಾಷ್ಟ್ರೀಯ ಅತಿಥಿಗಳೆಂದು ಭಾವಿಸಿ, ಅವರ ಅಂತ್ಯ ಕ್ರಿಯೆಗಳನ್ನು ಸರಕಾರೀ ವೆಚ್ಚದಿಂದಲೇ ಮಾಡಲು ವಿಶೇಷ ಆಜ್ಞೆಗಳನ್ನು ಹೊರಡಿಸಿದ್ದರು.

ಮರಣದ ಕಾಲಕ್ಕೆ ಜ್ವಿಗ್‌ರ ಮೂರು ಅಪೂರ್ಣಗ್ರಂಥಗಳು ಹಾಗೆ ಉಳಿದಿದ್ದುವು. ಒಂದೆರಡು ತಿಂಗಳ ಮುನ್ನ ಮಾತ್ರ ತಮ್ಮ 'ಆತ್ಮಕಥನ' ವನ್ನು ಬರೆದು ಮುಗಿಸಿದ್ದರು. (ಈ ಪುಸ್ತಕದ ಹೊದಿಕೆಯ ಮೇಲಿದ್ದ ಚಿತ್ರವು ಅವರ ಕೊನೆಕೊನೆಯ ದಿನಗಳಲ್ಲಿ ತೆಗೆದುದೇ ಆಗಿದೆ.)

'ಜ್ವಿಗ್'ರು ಚರಿತ್ರಕಾರರು, ಕಾದಂಬರಿಕಾರರು; ಮುಖ್ಯತಃ ಕತೆಗಾರರು.* ನಾಟಕ, ಕವನಗಳನ್ನು ಸಾಕಷ್ಟು ಬರೆದಿದ್ದಾರೆ. ಅವರು ಅನೇಕ ಮಹನೀಯರ ಜೀವನ ಚರಿತ್ರೆಗಳನ್ನು ಬರೆದಂತೆ, ಅವರ ಜೀವನ ಚರಿತ್ರೆಯನ್ನು ಅನೇಕರು ಬರೆದಿದ್ದಾರೆ. ಅವರಲ್ಲೊಬ್ಬರು—ಅವರನ್ನು 'ಯುರೋಪದ ಸಪ್ತಜ್ಞಾನಿಗಳಲ್ಲೊಬ್ಬರು— One of the seven wise men of Europe'— ಎಂದು ಉದ್ಗರಿಸಿದ್ದಾರೆ. ಜಾಗತಿಕ ದೃಷ್ಟಿ, ಜಾಗತಿಕ ಶಾಂತಿ ಇವೇ ಅವರ ಜೀವನದ ಹಾಸು-ಹೊಕ್ಕು. ಅವರು ಪ್ರಾಣನೀಗಿದ್ದೂ ಆದಕ್ಕಾಗಿಯೇ. ಅವರ ಬರೆಹಗಳಲ್ಲಿ ಎದ್ದು ಕಾಣುವ ಗುಣಗಳೆಂದರೆ ಸಾರಾಸಾರ ವಿಚಾರ, ಜಾಣ್ಮೆ, ಸುಣ್ಪು, ಗುಣ್ಪು; ಭೇದಕವಾದ ದೃಷ್ಟಿ—ಒಳನೋಟ, ಹಾಗು ವಿವೇಕಪೂರ್ಣವಾದ ಸಹೃದಯತೆ: ಇವೆಲ್ಲಾ ಅವರ ಸಾಹಿತ್ಯದ ಒಳಜೀವ. ಕವಿಯ ಕಲ್ಪಕತೆ ಕಾದಂಬರಿಕಾರನ ಸೃಜನಶಕ್ತಿಗಳು ಅವರ ಬರೆಹದ ಮರ್ಮ. ಅಂತಃಕರಣದ ಸೂಕ್ಷ್ಮವಾದ ಭಾವನಾವಿಲಾಸಗಳನ್ನು ಕುದುರಿಸಿ ಮೂರ್ತೀಕರಿಸಿ ಸಿಲ್ಲಿಸುವುದೇ ಅವರ ಕಲೆಯ ಅಂತರಂಗ. ಜೀವನದ ಗುಪ್ತಗಂಗೆಯ ಶೋಧವೇ ಅವರ ಸಾಹಿತ್ಯ ಸಿದ್ಧಿ. ಅವರ ಮಾತಿನಲ್ಲೇ ಹೇಳುವುದಾದರೆ— "ವ್ಯಕ್ತಿತ್ವದ ವಿಶ್ಲೇಷಣ ಹಾಗು ನಿರೂಪಣ ನನ್ನ ಅಭಿಲಾಷೆ ಹಾಗು ಅಭಿರುಚಿ. ಎಲ್ಲ ಕಾಲಗಳ ಎಲ್ಲ ದೇಶಗಳ ವಿಭೂತಿಗಳ ಜೀವನ ಮರ್ಮವನ್ನು ಕಂಡರಿಯು

---

* ಇಂಗ್ಲೀಷನಲ್ಲಿ ಪ್ರಕಟವಾದ ಇವರ ಕಥಾ ಗ್ರಂಥಗಳು :— Passion and pain, conflicts. Amok; Kaleidoscope: Tide of Fortune-ಮುಂತಾದವು.

ವುದೇ ನನ್ನ ಕಾರ್ಯದ ದಿಶೆ."* ಸಾಹಿತ್ಯ ಸೃಷ್ಟಿಯಲ್ಲೂ ಮುಖ್ಯತಃ ಕಥನ ಕಲೆಯಲ್ಲೂ ಅವರು ಈ ಸಿದ್ಧಿಯನ್ನು ಸಾಧಿಸಿದುದಕ್ಕೆ ಈ ಹೊತ್ತಿಗೆಯಲ್ಲಿ ಪ್ರಕಟವಾದ ಕತೆಗಳೇ ಸಾಕ್ಷಿ.

ಇಂತಹ ಮಹಾ ಸಾಹಿತಿಯ ಪ್ರಥಮ ಪರಿಚಯವನ್ನು ಮೊತ್ತ ಮೊದಲು ಕನ್ನಡಿಗರಿಗೆ ಮಾಡಿಕೊಟ್ಟ ಪುಣ್ಯ 'ಭಾರತಿ' ಯದೇ! ಇದೀಗ ಪುಸ್ತಕರೂಪದಲ್ಲಿ 'ಬಸವರಾಜ' ರಿಂದ ಲಲಿತ ಶೈಲಿಯಲ್ಲಿ ಅನುವಾದಿತ ವಾದ ಈ ಕತೆಗಳನ್ನು ಕನ್ನಡಿಗರಿಗೆ ಒಪ್ಪಿಸುವ ಭಾಗ್ಯವೂ ಭಾರತೀ ಪ್ರಕಾಶನ ಮಂದಿರದ್ದೇ ಆಗಿದೆ.



*"My main interest in writing has always been the psychological representation of personalities and their lives··· my work has always been collecting autograph manuscripts and studying the lives of great men of all ages."